WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೨, ೨೦೧೨ (ಮಾಘ ೧೩, ಶಕ ವರ್ಷ ೧೯೩೩) | ಸಂಚಿಕೆ ೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### COMMERCE & INDUSTRIES SECRETARIAT

**Sub :** Participation of Karnataka delegation at Canadian Manufacturing Technology Show at Toranto, Canada.

**Read :** Minutes of the Screening Committee meeting held on 29-09-2011.

**Preamble:**

The Commissioner for Industrial Development and Director of Industries and Commerce has recommended a delegation of the following three officers (1) Shri V. Venugopal, Managing Director, KUM, (2) Shri B. Mahesh, Joint Director, KUM and (3) Shri N. Chandrasekhar, Joint Director [Technical Cell], Commerce and Industries Department for participating in the "India Show" at "Canadian Manufacturing Technology Show" at being organized by EEPC at Toranto, Canada from 17-10-2011 to 20-10-2011.

The Screeing Committee held under the Chairmanship of the Principal Secretary, Commerce and Industries Department on 29-09-2011 has approved the above officers for participating in the event.

Finance Department has given concurance to the proposal of Administrative Department in relaxation of economy orders subject to other approvals from competent Authorities being taken by Commerce & Industries Department Vide Note No. FD 1521 Exp-1/2011, dated : 15-10-2011.

Hence the following order.

**Government Order No. CI 223 SPI 2011, Bangalore Dated: 25th November 2011.**

In the circumstances explained above, the deputation of Shri B. Mahesh, Joint Director, KUM, and Shri N. Chanrasekhar, Joint Director [Technical Cell], Commerce and Industries Department to participate in the "India Show" at "Canadian Manufacturing Technology show" held at Toranto, Canada from 17-10-2011 to 20-10-2011 is approved and the journey made is also ratified.

This expenditure in this behalf will be borne by the State Government.

By Order and in the name of the Governor of Karnataka,

PR. 52

**Shivashankar Naik. L.**
Desk Officer (Technical Cell)(I/c)
Commerce & Industries Department

### ತೋಟಗಾರಿಕೆ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ದ್ರಾಕ್ಷಾರಸ ಬೆಳೆಯಲು ಸೂಕ್ತ ಪ್ರದೇಶಗಳನ್ನು ಗುರುತಿಸುವುದು.

**ಓದಲಾಗಿದೆ :** 1. ಕೃತೋಇ 513 ತೋಇವಿ 2005 ದಿನಾಂಕ : 14–03–2007.
2. ಕೃತೋಇ 353 ತೋಇವಿ 2008 ದಿನಾಂಕ : 04–01–2010.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದ ರೈತರ ಹಿತದೃಷ್ಟಿಯಿಂದ ದ್ರಾಕ್ಷಾರಸ ಉತ್ಪಾದನೆ ಮತ್ತು ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸುವ ದಿಸೆಯಲ್ಲಿ ಸೂಕ್ತ ಪ್ರೋತ್ಸಾಹ ನೀಡಲು ಸರ್ಕಾರವು ಕರ್ನಾಟಕ ದ್ರಾಕ್ಷಿ ಸಂರಕ್ಷಣೆ ಮತ್ತು ದ್ರಾಕ್ಷಾರಸ (ವೈನ್) ನೀತಿ – 2007ನ್ನು ಉಲ್ಲೇಖಿತ (1) ರ ಆದೇಶದಲ್ಲಿ ಜಾರಿಗೆ ತಂದಿರುತ್ತದೆ. ಸದರಿ ಆದೇಶದಲ್ಲಿ ದ್ರಾಕ್ಷಾರಸ ತಳಿಗಳನ್ನು ಬೆಳೆಯಲು ಸೂಕ್ತವಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು "ನಂದಿ ವ್ಯಾಲಿ" ಎಂದು ಮತ್ತು ಬಿಜಾಪುರ, ಬಾಗಲಕೋಟೆ ಹಾಗೂ ಬೆಳಗಾವಿ ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು "ಕೃಷ್ಣ ವ್ಯಾಲಿ" ಎಂದು ಘೋಷಿಸಲಾಗಿರುತ್ತದೆ.

ತದನಂತರ ಹೊರಡಿಸಲಾದ ಉಲ್ಲೇಖ (2) ರ ಆದೇಶದಲ್ಲಿ "ನಂದಿ ವ್ಯಾಲಿ" ವ್ಯಾಪ್ತಿಯಡಿ ರಾಮನಗರ ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳನ್ನು ಹಾಗೂ "ಕೃಷ್ಣಾವ್ಯಾಲಿ" ವ್ಯಾಪ್ತಿಯಡಿ ಗುಲ್ಬರ್ಗಾ, ರಾಯಚೂರು, ಗದಗ್, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನು ಸೇರ್ಪಡಿಸಲಾಗಿರುತ್ತದೆ.

ಮೇಲ್ಕಂಡ 'ನಂದಿ ವ್ಯಾಲಿ' 'ಕೃಷ್ಣವ್ಯಾಲಿ' ಪ್ರಾಂತ್ಯಗಳ ರೀತಿ ಮೈಸೂರು, ಮಂಡ್ಯ ಮತ್ತು ಚಾಮರಾಜನಗರ ಜಿಲ್ಲೆಗಳು ಉತ್ತಮ ಮಣ್ಣು ಮತ್ತು ಹವಾಗುಣ ಹೊಂದಿರುವುದರಿಂದ ವೈನ್ ತಳಿ ದ್ರಾಕ್ಷಿ ಬೆಳೆಯಲು/ಘಟಕ ಸ್ಥಾಪಿಸಲು ಸೂಕ್ತ ಪ್ರದೇಶವಾಗಿದೆ. ರೆಡ್ ವೈನ್ ಮತ್ತು ವೈಟ್ ವೈನ್ ತಳಿಗಳನ್ನು ಬೆಳೆಯಲು ಸದರಿ ಜಿಲ್ಲೆಗಳು ಪೂರಕ ವಾತಾವರಣ ಹೊಂದಿರುವುದನ್ನು ಗಮನಿಸಲಾಗಿದೆ.

ರೈತರನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈಗಿರುವ 'ನಂದಿ' 'ಕೃಷ್ಣಾ' ವ್ಯಾಲಿಗಳ ಜೊತೆಗೆ ಮೈಸೂರು, ಮಂಡ್ಯ ಮತ್ತು ಚಾಮರಾಜನಗರ ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು "ಕಾವೇರಿ ವ್ಯಾಲಿ" ಎಂದು ಘೋಷಿಸುವ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದೆ. ಸದರಿ ಕ್ರಮದಿಂದ ಈ ಪ್ರದೇಶದ ಭೌಗೋಳಿಕ ವಿಶಿಷ್ಟತೆಗೆ ಮಾನ್ಯತೆ ದೊರೆತು ಪ್ರದೇಶದ ಉತ್ಪನ್ನಗಳು ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿಶೇಷವಾಗಿ ಗುರುತಿಸಲ್ಪಡುತ್ತದೆ. ಹೀಗಾಗಿ ರಫ್ತುಗೆ ವಿಫಲವಾದ ಅವಕಾಶಗಳು ದೊರೆತು ರೈತರು ಹಾಗೂ ಉದ್ಯಮಿಗಳಿಗೆ ಕೆಳಕಂಡಂತೆ ಪ್ರಯೋಜನವಿರುತ್ತದೆ :

**ಪ್ರಸ್ತಾಪಿತ ಕಾವೇರಿ ಪ್ರಾಂತ್ಯದ ರೈತರಿಗೆ ಆಗುವ ಲಾಭಗಳು :**

- ದ್ರಾಕ್ಷಿ ಬೆಳೆಯ ವಿಸ್ತೀರ್ಣ ಹೆಚ್ಚಾಗುತ್ತದೆ.
- ಒಪ್ಪಂದ ಕೃಷಿಯ ಮೂಲಕ ರೈತರು ಉತ್ತಮ ಮತ್ತು ನಿಶ್ಚಿತ ಆದಾಯವನ್ನು ಪಡೆಯಲು ಸಾಧ್ಯವಾಗುತ್ತದೆ.
- ಉದ್ಯಮಿಗಳು ದ್ರಾಕ್ಷಿ ಬೆಳೆ ಬೆಳೆಯಲು ಎಲ್ಲಾ ತಾಂತ್ರಿಕ ಮಾಹಿತಿಯನ್ನು ನೀಡಲು ಸಾಧ್ಯವಾಗುತ್ತದೆ.
- ಹೆಚ್ಚಿನ ಉದ್ಯೋಗವನ್ನು ಸೃಷ್ಟಿಸಲು ಸಾಧ್ಯವಾಗುತ್ತದೆ.
- ಗುಚ್ಛ ಗ್ರಾಮಗಳಲ್ಲಿ ಅನುಷ್ಠಾನಗೊಳಿಸುವುದರಿಂದ ಎಲ್ಲಾ ಸವಲತ್ತುಗಳನ್ನು ಮತ್ತು ತಾಂತ್ರಿಕ ಮಾಹಿತಿಯನ್ನು ನೀಡಲು ಸಾಧ್ಯವಾಗುತ್ತದೆ.

**ಹೊಸದಾಗಿ ಪ್ರಾರಂಭಿಸುವ ಉದ್ಯಮಿಗಳಿಗೆ ಆಗುವ ಲಾಭಗಳು :**

- ದ್ರಾಕ್ಷಾರಸ ಘಟಕಗಳನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ.
- ಉದ್ಯಮಿಗಳ ಪ್ರದೇಶಗಳನ್ನು ಗುರುತಿಸಲು ಆಗುತ್ತಿದ್ದ ತೊಂದರೆ ಮತ್ತು ಪ್ರದೇಶಗಳನ್ನು ಗುರುತಿಸಲು ಬೇಕಾದ ಸಮಯ ಉಳಿತಾಯವಾಗುತ್ತದೆ.
- ದ್ರಾಕ್ಷಾರಸ ಘಟಕಕ್ಕೆ ಬೇಕಾದ ಕಚ್ಚಾವಸ್ತುಗಳು ಲಭ್ಯವಾಗುತ್ತದೆ.
- ತಾಂತ್ರಿಕ ಮಾಹಿತಿ ನೀಡಲು ಸಾಧ್ಯವಾಗುತ್ತದೆ.
- ದ್ರಾಕ್ಷಿ ಬೆಳೆಯನ್ನು ಅಭಿವೃದ್ಧಿಗೊಳಿಸಲು ಸಾಧ್ಯವಾಗುತ್ತದೆ.
- ದ್ರಾಕ್ಷಿಯು ಹಾಳಾಗದಂತೆ ಸಂಸ್ಕರಣೆ ಮಾಡಲು ಸಾಧ್ಯವಾಗುತ್ತದೆ.
- ರಾಜ್ಯಕ್ಕೆ ಹೆಚ್ಚಿನ ಬಂಡವಾಳವನ್ನು ಪಡೆಯಲು ಸಾಧ್ಯವಾಗುತ್ತದೆ.

ದಿನಾಂಕ : 11-02-2011 ರಂದು ನಡೆದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ದ್ರಾಕ್ಷಾರಸ ಮಂಡಳಿಯ ಸಭೆಯಲ್ಲಿ ಮೈಸೂರು, ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು "ಕಾವೇರಿ ವ್ಯಾಲಿ" ಎಂದು ಕರ್ನಾಟಕ ದ್ರಾಕ್ಷಿ ಸಂರಕ್ಷಣೆ ಮತ್ತು ದ್ರಾಕ್ಷರಸ ನೀತಿ, 2007ರಡಿಯಲ್ಲಿ ಘೋಷಿಸಲು ತೀರ್ಮಾನಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 208 ತೋಇವಿ 2011, ಬೆಂಗಳೂರು, ದಿನಾಂಕ: 30 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ದ್ರಾಕ್ಷಿ ಸಂಸ್ಕರಣೆ ಮತ್ತು ದ್ರಾಕ್ಷಾರಸ (ವೈನ್) ನೀತಿ – 2007 ರಲ್ಲಿನ ಧ್ಯೇಯ ದೋರಣೆಗಳ ಅನುಷ್ಠಾನ ಸಂಬಂಧ ಮೈಸೂರು, ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಗಳನ್ನೊಳಗೊಂಡ ಪ್ರದೇಶ/ಪ್ರಾಂತ್ಯವನ್ನು "ಕಾವೇರಿ ವ್ಯಾಲಿ" ಎಂದು ಈ ಮೂಲಕ ಘೋಷಿಸಲಾಗಿದೆ. ಉಲ್ಲೇಖ (1) ರ ಆದೇಶದಲ್ಲಿ ಸಾದರ ಪಡಿಸಲಾಗಿರುವ ವೈನ್ ನೀತಿಯ ಅಂಶಗಳು ಹಾಗೂ ಈ ಕುರಿತಂತೆ ಆಗಿಂದಾಗ್ಗೆ ಹೊರಡಿಸಲಾಗುವ ಆದೇಶಗಳು/ನಿರ್ದೇಶನಗಳನ್ನು 'ಕಾವೇರಿ ವ್ಯಾಲಿ' ವೈನ್ ಪ್ರಾಂತ್ಯಕ್ಕೆ ಸಹ ಅನ್ವಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.53

**ಬಿ. ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿಯಡಿ ಕಾರ್ಯನಿರ್ವಹಿಸುತ್ತಿರುವ ಪಡಿತರ ವಸ್ತುಗಳ ಚಿಲ್ಲರೆ ಮಾರಾಟಗಾರರಿಗೆ ನೀಡಲಾಗುತ್ತಿರುವ ಲಾಭಾಂಶ ದರಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಆನಾಸ 373 ಡಿಆರ್ಎ 05, ದಿನಾಂಕ : 27-08-2008.

2. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರ ಸಂಖ್ಯೆ : ಸಿಎಫ್ಎಸ್ : ಡಿಡಿ : III : 165/2005-06, ದಿನಾಂಕ : 08-02-2011.

**ಪ್ರಸ್ತಾವನೆ :**

ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಸರ್ಕಾದ ಆದೇಶದಲ್ಲಿ ಪಡಿತರ ವಸ್ತುಗಳ ಚಿಲ್ಲರೆ ಮಾರಾಟಗಾರರಿಗೆ ಲಾಭಾಂಶವನ್ನು ಪ್ರತಿ ಕ್ವಿಂಟಾಲ್ ಅಕ್ಕಿಗೆ ರೂ. 29/- ರಂತೆ ಹಾಗೂ ಪ್ರತಿ ಕ್ವಿಂಟಾಲ್ ಗೋಧಿಗೆ ರೂ. 23/- ರಂತೆ ನಿಗಧಿಪಡಿಸಲಾಗಿರುತ್ತದೆ.

ಮೇಲೆ ಉಲ್ಲೇಖ (2) ರಲ್ಲಿ ಓದಲಾದ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರ ಪತ್ರದಲ್ಲಿ ನ್ಯಾಯ ಬೆಲೆ ಅಂಗಡಿಗಳ ಮಾಲೀಕರು ಪ್ರತಿ ಕ್ವಿಂಟಾಲ್ ಆಹಾರಧಾನ್ಯದ ಎತ್ತುವಳಿ, ವಿತರಣೆಗೆ ಖರ್ಚು ಮಾಡುತ್ತಿರುವ ಬಂಡವಾಳದ ಮೇಲಿನ ಬಡ್ಡಿ,

ಡಿ.ಡಿ. ಕಮೀಷನ್, ತೂಕಮಾಡುವವರ ಸಂಬಳ, ನ್ಯಾಯ ಬೆಲೆ ಅಂಗಡಿಗಳ ಬಾಡಿಗೆ ವೆಚ್ಚ, ವಿದ್ಯುಚ್ಛಕ್ತಿ ವೆಚ್ಚ, ಲೇಖನ ಸಾಮಗ್ರಿಗಳ ವೆಚ್ಚ, ಪ್ರಯಾಣ ವೆಚ್ಚ ಇತ್ಯಾದಿಗಳನ್ನು ಲೆಕ್ಕಹಾಕಿ ಪ್ರಸ್ತುತ ಚಿಲ್ಲರೆ ಮಾರಾಟಗಾರರಿಗೆ ನೀಡಲಾಗುತ್ತಿರುವ ಲಾಭಾಂಶಗಳನ್ನು ಹೆಚ್ಚಿಸುವಂತೆ ಕೋರಿರುತ್ತಾರೆ.

ಅಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 67 ಡಿಆರ್‌ಎ 2011, ಬೆಂಗಳೂರು, ದಿನಾಂಕ : 9 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಟ್ಟಣ/ನಗರ/ಅನೌಪಚಾರಿಕ ಪಡಿತರ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳ ಮೂಲಕ ಪಡಿತರ ವಿತರಿಸುವ ಚಿಲ್ಲರೆ ವರ್ತಕರಿಗೆ ಪ್ರತಿ ಕ್ವಿಂಟಾಲ್ ಗೋಧಿಯ ಚಿಲ್ಲರೆ ಲಾಭಾಂಶವನ್ನು ರೂ. 23/- ರಿಂದ ರೂ. 25/- ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2001-12 ನೆ ಸಾಲಿನ ಲೆಕ್ಕ ಶೀರ್ಷಿಕೆ "2408-01-102-0-01" ರಡಿಯಲ್ಲಿ ಭರಿಸತಕ್ಕದ್ದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 930-5/2011, ದಿನಾಂಕ : 29-11-2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ - 1 ಮತ್ತು 2)

ಪಿ.ಆರ್.54

## ಕೃಷಿ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ಕೃಇ/110/ಎಎಇ/2011 ಬೆಂಗಳೂರು, ದಿನಾಂಕ 25 ನೇ ನವೆಂಬರ್ 2011.**

**ವಿಷಯ :** ಪ್ರಾಯೋಗಿಕ ಮಾರ್ಪಡಿಸಿದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2011 ರ ಮುಂಗಾರು ಹಂಗಾಮಿನಲ್ಲಿ ಅನುಷ್ಠಾನಗೊಳಿಸಲು ಘಟಕವಾರು ಬೆಳೆಗಳ ಘೋಷಣೆ ಬಗ್ಗೆ - ಆದೇಶಗಳು.

**ಉಲ್ಲೇಖ :** ಸಮಸಂಖ್ಯೆಯ ಸರ್ಕಾರದ ಆದೇಶದ ದಿನಾಂಕ : 26-05-2011.

ಪ್ರಾಯೋಗಿಕ ಮಾರ್ಪಡಿಸಿದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2011ರ ಮುಂಗಾರು ಹಂಗಾಮಿನಲ್ಲಿ ಅನುಷ್ಠಾನಗೊಳಿಸಲು ಘಟಕವಾರು ಬೆಳೆಗಳ ಘೋಷಣೆ ಬಗ್ಗೆ ಉಲ್ಲೇಖಿತ ಆದೇಶದಲ್ಲಿನ ಪುಟ ಸಂಖ್ಯೆ 37 ಮತ್ತು 38 ರಲ್ಲಿ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಕೆಲವು ಗ್ರಾಮ ಪಂಚಾಯತಿಗಳ ಹೆಸರುಗಳು ತಪ್ಪಾಗಿ ನಮೂದಿತವಾಗಿದ್ದು, ಅವುಗಳನ್ನು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

| ಪುಟ ಸಂಖ್ಯೆ | ಗ್ರಾಮ ಪಂಚಾಯತಿ ಕ್ರಮ ಸಂಖ್ಯೆ | ಗ್ರಾಮ ಪಂಚಾಯತಿ ಹೆಸರು ಸರ್ಕಾರದ ಆದೇಶದಲ್ಲಿ ನಮೂದಾಗಿರುವುದು | ಗ್ರಾಮ ಪಂಚಾಯತಿ ಹೆಸರು ಸರ್ಕಾರದ ಆದೇಶದಲ್ಲಿ ಓದಿಕೊಳ್ಳತಕ್ಕದ್ದು |
|---|---|---|---|
| 37 | 605 | ಭೂಪನಹಳ್ಳಿ | ಭೂವನಹಳ್ಳಿ |
| 38 | 625 | ದೊಡ್ಡಹುಲಿಕುಂಟೆ | ಹುಲಿಕುಂಟೆ |
| 38 | 631 | ಹುಲಿಕುಂಟೆ | ಹಂದಿಕುಂಟೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪರಂಧಾಮಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕೃಷಿ ಇಲಾಖೆ

ಪಿ.ಆರ್.55

## ಸಹಕಾರ ಸಚಿವಾಲಯ

**ವಿಷಯ :** 2004-05 ನೇ ಸಾಲಿನಿಂದ 2010-11 ರ ವರೆಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳ ಹಾಗೂ ನೇಕಾರರಿಗೆ ಮೀನುಗಾರರಿಗೆ ನೀಡಿದ ಬಡ್ಡಿ ಸಹಾಯಧನ ಕ್ಲೇಮುಗಳಿಗೆ ಸಂಬಂಧಿಸಿದಂತೆ ಅಂತಿಮ ಗಡುವು ವಿಸ್ತರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಿಒ 129 ಸಿಎಲ್ ಎಸ್ 2011, ದಿನಾಂಕ : 01-07-2011.

2. ಸರ್ಕಾರಿ ಆದೇಶ ಸಂಖ್ಯೆ : ಸಿಒ 129 ಸಿಎಲ್ ಎಸ್ 2011, ದಿನಾಂಕ : 02-11-2011.

3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/ಸಿಎಬಿ-1/19/2011-12, ದಿನಾಂಕ : 20-10-2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2004-05 ನೇ ಸಾಲಿನಿಂದ 2010-11 ನೇ ಸಾಲಿನವರೆಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ನೇಕಾರಿಕೆ ಮತ್ತು ಮೀನುಗಾರಿಕೆ ಸಾಲಗಳಿಗೆ ಬಡ್ಡಿ ಸಹಾಯಧನದ ಸೌಲಭ್ಯವನ್ನು ಪಡೆಯಲು ದಿನಾಂಕ : 30-09-2011 ರ ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗಿತ್ತು. ಮೇಲೆ ಓದಲಾದ (2) ರ ಆದೇಶದಲ್ಲಿ ಸದರಿ ಅವಧಿಯನ್ನು ದಿನಾಂಕ : 30-11-2011 ರವರೆಗೆ ವಿಸ್ತರಿಸಲಾಗಿತ್ತು. ಮಾನ್ಯ ಸಹಕಾರ ಸಚಿವರು ಸರ್ಕಾರದ ಹಲವು ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳನ್ನಾಗಿ

ಘೋಷಿಸಿದ ಹಿನ್ನೆಲೆಯಲ್ಲಿ ಹಾಗೂ ಸುಸ್ತಿ ಸಾಲಗಳನ್ನು ಮರುಪಾವತಿಸಲು ತಿಳಿಸಿರುವುದರಿಂದ 31 ನೇ ಡಿಸೆಂಬರ್ 2011ರವರೆಗೆ ವಿಸ್ತರಿಸಲು ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

ಆದುದರಿಂದ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 129 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ : 9 ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು 2004–05ನೇ ಸಾಲಿನಿಂದ 2010–11ನೇ ಸಾಲಿನವರೆಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ, ನೇಕಾರಿಕೆ ಮತ್ತು ಮೀನುಗಾರಿಕೆ ಸಾಲಗಳಿಗೆ ಬಡ್ಡಿ ಸಹಾಯಧನದ ಸೌಲಭ್ಯವನ್ನು ಪಡೆಯಲು ಅಂತಿಮ ದಿನಾಂಕವನ್ನು 31–12–2011ರವರೆಗೆ ನಿಗದಿಗೊಳಿಸಿ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್.56

**ಸಹಕಾರ ಸಚಿವಾಲಯ**

**ವಿಷಯ :** ಮುತ್ತೂಟ್ ಮಿನಿ ಫೈನಾನ್ಸಿಯರ್ಸ್ ಪ್ರೈ. ಲಿ., ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿ ಅಧಿನಿಯಮ 1961 ರಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರು ಹಾಗೂ ಲೇವಾದೇವಿ ಮಹಾನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎನ್ಎಂಎನ್/ವೈಎಂಸಿ/89ಬಿ/2010–11, ದಿನಾಂಕ 21–10–2011

**ಪ್ರಸ್ತಾವನೆ :**

ಮುತ್ತೂಟ್ ಮಿನಿಫೈನಾನ್ಸಿಯರ್ಸ್ ಪ್ರೈ. ಲಿ., ಈ ಸಂಸ್ಥೆಯು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕೇರಳ ಇವರಿಂದ (ಸಂಖ್ಯೆ: 09–12154/1998 ಪ್ರಕಾರ) ನೋಂದಣಿಯಾಗಿದ್ದು, ಆರ್‌ಬಿಐನ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳ ವಿಭಾಗ ಪ್ರಾಂತೀಯ ಕಛೇರಿ ತಿರುವನಂತಪುರಂ. ಇವರಿಂದ (ಸಂಖ್ಯೆ: N-16.00175, ದಿನಾಂಕ 23–07–2002 ಪ್ರಕಾರ) ಎನ್‌ಬಿ ಎಫ್‌ಸಿ ಸಂಸ್ಥೆ ಎಂದು ಪ್ರಮಾಣ ಪತ್ರ ಪಡೆದಿದ್ದು, ಕರ್ನಾಟಕದಲ್ಲಿಯೂ ಸಹ ಹಣಕಾಸಿನ ವ್ಯವಹಾರಗಳನ್ನು ನಡೆಸುತ್ತಿದ್ದು ತನ್ನ ಎಲ್ಲಾ ಶಾಖೆಗಳಿಗೆ ಸಂಬಂಧಿಸಿದಂತೆ ರೂ. 60,000/– ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಪಾವತಿಸಿರುತ್ತದೆ. ಈಗ ಸದರಿ ಸಂಸ್ಥೆಯು ಕರ್ನಾಟಕ ಲೇವಾದೇವಿ ಅಧಿನಿಯಮ 1961 ರಿಂದ ವಿನಾಯಿತಿ ನೀಡಲು ಸರ್ಕಾರಕ್ಕೆ ದಿನಾಂಕ 19–07–2010 ರಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಪರಿಶೀಲಿಸಿ ವರದಿ ನೀಡಿರುತ್ತಾರೆ. ಈ ವರದಿಯ ಮೇರೆಗೆ ಭಾರಿತೀಯ ರಿಸರ್ವ್ ಬ್ಯಾಂಕ್ ಶಿಫಾರಸ್ಸಿನ ಮೇರೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961 ತಿದ್ದುಪಡಿ ತರಲು ಉದ್ದೇಶಿಸಿದ್ದು, ಇದರ ಮೇರೆಗೆ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳಿಂದ ಲೇವಾದೇವಿ ಅಧಿನಿಯಮದಿಂದ ಹೊರಗಿಡಲು ಪ್ರಸ್ತಾಪಿಸಲಾಗಿದೆ ಹಾಗೂ ಸದರಿ ಸಮಸ್ಥೆಯು ಸಾರ್ವಜನಿಕರಿಂದ ಕರ್ನಾಟಕ ಲೇವಾದೇವಿ ಅಧಿನಿಯಮದಲ್ಲಿ ನಿಗದಿಪಡಿಸಿರುವ ಬಡ್ಡಿದರಕ್ಕಿಂತ ಹೆಚ್ಚಿನ ಬಡ್ಡಿ ಪಡೆಯುತ್ತಿದ್ದಲ್ಲಿ ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇಧ ಅಧಿನಿಯಮ 2004ರಡಿಯಲ್ಲಿ ಕ್ರಮ ಕೈಗೊಳ್ಳಲು ಅವಕಾಶವಿದ್ದು ಸಾರ್ವಜನಿಕರ ಹಿತಾಸಕ್ತಿ ಕಾಪಾಡುವ ಅವಕಾಶವಿರುವುದರಿಂದ ಮುತ್ತೂಟ್ ಮಿನಿಫೈನಾನ್ಸಿಯರ್ಸ್ ಪ್ರೈ.ಲಿ., ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961ರ ಪ್ರಕರಣ 2(10)(iv)(ಬಿ) ರಡಿಯಲ್ಲಿ ವಿನಾಯಿತಿ ನೀಡಬಹುದೆಂದು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಮುಂದುವರೆದು, ಸದರಿ ಸಂಸ್ಥೆಯು ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ 1934ರ ಪ್ರಕರಣ 45IA ರಡಿಯಲ್ಲಿ ನೋಂದಣಿಯಾಗಿರುವುದರಿಂದ ಅದರ ವ್ಯವಹಾರಗಳು ಆರ್‌ಬಿಐ ನಿಂದ ನಿಯಂತ್ರಣಕ್ಕೊಳಪಡುತ್ತವೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 22 ಸಿಎಂಎಲ್ 2011, ಬೆಂಗಳೂರು, ದಿನಾಂಕ : 23–11–2011.**

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಲೇವಾದೇವಿ ಅಧಿನಿಯಮ 1961ರ ಪ್ರಕರಣ (2)ರ ಖಂಡ 10ರ ಉಪಖಂಡ (iv)ರ ಐಟಂ (ಬಿ) ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮುತ್ತೂಟ್ ಮಿನಿ ಫೈನಾನ್ಸಿಯರ್ಸ್ ಪ್ರೈ. ಲಿ., ಈ ಸಂಸ್ಥೆಯು ಸದರಿ ಐಟಂನ ಉಪಬಂಧದಿಂದ ಮುಂದಿನ ಆದೇಶದವರೆಗೆ ಈ ಕೆಳಗಿನ ಷರತ್ತುಗಳಿಗೊಳಪಟ್ಟು ವಿನಾಯಿತಿ ನೀಡಲಾಗಿದೆ.

1. ಸಾರ್ವಜನಿಕರಿಂದ/ಗ್ರಾಹಕರಿಂದ ಗಂಭೀರ ದೂರು ದಾಖಲಾಗಿ ಅಧಿಕ ಬಡ್ಡಿ ಪಡೆಯುತ್ತಿರುವುದು ಕಂಡುಬಂದಲ್ಲಿ ನೀಡಲಾದ ವಿನಾಯಿತಿಯನ್ನು ವಾಪಸ್ಸು ಪಡೆಯಲಾಗುವುದು.
2. ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇಧ ಅಧಿನಿಯಮ 2004 ಅನ್ನು ಅನುಸರಿಸುವುದು
3. ದಿನಾಂಕ 31–3–2011ರ ಅಂತ್ಯಕ್ಕೆ ಸರ್ಕಾರಕ್ಕೆ ಪಾವತಿಸಿರುವ ಭದ್ರತಾ ಠೇವಣಿ ರೂ. 60,000/– ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. 57

## ಸಹಕಾರ ಸಚಿವಾಲಯ

**ತಿದ್ದುಪಡಿ ಆದೇಶ**

ಸಂಖ್ಯೆ: ಸಿಒ 96 ಸಿಎಲ್‌ಎಸ್ 2011, ಬೆಂಗಳೂರು, ದಿನಾಂಕ 25-11-2011

ಸರ್ಕಾರಿ ಆದೇಶದ ಸಂಖ್ಯೆ: ಸಿಒ 96 ಸಿಎಲ್‌ಎಸ್ 2011, ಬೆಂಗಳೂರು, ದಿನಾಂಕ 19-10-2011ರ ಆದೇಶದ ಕಂಡಿಕೆ 2ರ ನಂತರ ಈ ಕೆಳಕಂಡ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

"ಬಿಡುಗಡೆ ಮಾಡಲಾದ ಮೊತ್ತವನ್ನು ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿ ಠೇವಣಿಸತಕ್ಕದ್ದು. ತದನಂತರ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ಸದರಿ ಹಣವನ್ನು ಸಂಬಂಧಪಟ್ಟ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಬಿಡುಗಡೆ ಮಾಡತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. 58

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಾಮಗ್ರಿ ಖರೀದಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಮೂಅಇ 05 ಯುಐಪಿ 2006 (ಪಿ), ದಿನಾಂಕ: 18-06-2007
2. ಸರ್ಕಾರದ ಆದೇಶ ಸಂಖ್ಯೆ: ಮೂಅಇ 77 ಮೂಇವಿ 2007, ದಿನಾಂಕ: 25-10-2007
3. ಸರ್ಕಾರದ ಆದೇಶ ಸಂಖ್ಯೆ: ಮೂಅಇ 80 ಮೂತಾಂವಿ 2008, ದಿನಾಂಕ: 23-10-2008
4. ಸರ್ಕಾರದ ಆದೇಶ ಸಂಖ್ಯೆ: ಮೂಅಇ 87 ಮೂಇವಿ 2009, ದಿನಾಂಕ: 26-08-2009
5. ಸರ್ಕಾರದ ಆದೇಶ ಸಂಖ್ಯೆ: ಮೂಅಇ 72 ಮೂಇವಿ 2010, ದಿನಾಂಕ: 18-08-2010
6. ಸಿ.ಎಫ್.ಒ ಹಾಗೂ ಕಂಪನಿ ಸೆಕ್ರೆಟರಿ, ಐಡೆಕ್‌ರವರ ಪತ್ರ ಸಂ. ಐಡೆಕ್/2011-12/1062, ದಿನಾಂಕ 31-10-2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂಖ್ಯೆ (1)ರ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ನಿರ್ದೇಶಕರು ಹಾಗೂ ತಜ್ಞರನ್ನು ಒಳಗೊಂಡಂತೆ ಪಿಪಿಪಿ ಕೋಶವನ್ನು ರಚಿಸಲು ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಹೊಸ ಮೂಲಸೌಲಭ್ಯ ಅಭಿವೃದ್ಧಿ ನೀತಿ 2007ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಪಿಪಿಪಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಇಲಾಖೆಯ ಅಧಿಕಾರಿಗಳಿಗೆ/ಏಜೆನ್ಸಿಗಳಿಗೆ ತರಬೇತಿ ನೀಡುವುದಕ್ಕೆ ರೂ. 5.00 ಲಕ್ಷಗಳನ್ನು ಹಾಗೂ ಮಾಹಿತಿ ಮತ್ತು ದಾಖಲೆ ಕೇಂದ್ರಕ್ಕಾಗಿ (Information & Documentation Centre) ರೂ. 5.00 ಲಕ್ಷಗಳು ಒಟ್ಟು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (3)ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ನೀತಿ 2007 ರಂತೆ ಸಾಮರ್ಥ್ಯ ಅಭಿವೃದ್ಧಿ ಬಗ್ಗೆ ತರಬೇತಿ ಕಾರ್ಯಕ್ರಮಗಳ ಸಮರ್ಪಕ ನಿರ್ವಹಣೆ ಹಾಗೂ ಈ ಇಲಾಖೆಯಲ್ಲಿ ಮಾಹಿತಿ ಮತ್ತು ದಾಖಲೆ ಕೇಂದ್ರ ಸ್ಥಾಪನೆ, ಉನ್ನತೀಕರಣ ಮತ್ತು ಲಾಜಿಸ್ಟಿಕ್‌ಗಳಿಗೆ ಅಗತ್ಯವಾದ ಸಾಮಗ್ರಿಗಳನ್ನು ಐಡೆಕ್ ಮುಖಾಂತರ ಖರೀದಿಸಲು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಾಮಗ್ರಿಗಳಾದ ಜೆರಾಕ್ಸ್ ಯಂತ್ರ, ಸ್ಟೇಷನರಿ ಸಾಮಗ್ರಿ, ಲ್ಯಾಪ್‌ಟಾಪ್/ಡೆಸ್ಕ್‌ಟಾಪ್ ಕಂಪ್ಯೂಟರ್ ಫೆರಿಫರಲ್ಸ್ ಇತ್ಯಾದಿ ಖರೀದಿ ಮಾಡಲು ರೂ. 15.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ಪಿಪಿಪಿ ಕೋಶದ ತರಬೇತಿ, capacity building ಮಾಹಿತಿ ಡಾಕ್ಯುಮೆಂಟೇಷನ್ ಸೆಂಟರ್ ಹಾಗೂ 2010-11ನೇ ಸಾಲಿನ ವೆಚ್ಚಗಳಿಗಾಗಿ ರೂ. 30.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಸಿಎಫ್‌ಒ ಮತ್ತು ಕಂಪನಿ ಕಾರ್ಯದರ್ಶಿ ಐಡೆಕ್ ಇವರು ವರದಿ ಮಾಡಿ, ಸರ್ಕಾರವು ಸಂಸ್ಥೆಗೆ ಬಿಡುಗಡೆ ಮಾಡಿದ ಅನುದಾನವನ್ನು ಪಿಪಿಪಿ ಕೋಶದ ತರಬೇತಿ, capacity building ಮಾಹಿತಿ ಡಾಕ್ಯುಮೆಂಟೇಷನ್ ಸೆಂಟರ್ ಇವುಗಳಿಗೆ ವೆಚ್ಚವಾಗಿದ್ದು 2011-12ನೇ ಸಾಲಿಗೆ ಅಗತ್ಯ ಸಾಮಗ್ರಿಗಳಾದ ಜರಾಕ್ಸ್ ಯಂತ್ರ, ಸ್ಟೇಷನರಿ ಸಾಮಗ್ರಿ, ಲ್ಯಾಪ್‌ಟಾಪ್/ಡೆಸ್ಕ್‌ಟಾಪ್ ಕಂಪ್ಯೂಟರ್ ಫೆರಿಫರಲ್ಸ್ ಮತ್ತು ಟಾಟಾ ಡೆಕೊಮೊ ಕಾರ್ಡ್ ಇತ್ಯಾದಿ ಖರೀದಿ ಮಾಡಲು ಸರ್ಕಾರವು ಹೆಚ್ಚುವರಿಯಾಗಿ ರೂ. 30.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 80 ಮೂತಾಂವಿ 2008, ಬೆಂಗಳೂರು, ದಿನಾಂಕ : 12-12-2011.**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಭೆಗಳು ಹಾಗೂ ಇತರೆ ಖರ್ಚುಗಳಿಗಾಗಿ ರೂ. 30.00 ಲಕ್ಷಗಳ ಅನುದಾನವನ್ನು (ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಐಡೆಕ್ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 3451–00–090–1–06–125 Infrastructure Preliminary Studies and modernisation ಇದರಡಿ 2011–12ನೇ ಅನುದಾನದಿಂದ ಭರಿಸತಕ್ಕದ್ದು.

ಸದರಿ ಮೊತ್ತವನ್ನು ಚೀಫ್ ಫೈನಾನ್ಷಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್ ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ ಹಾಗೂ ಖರ್ಚು ಮಾಡಿದ ಪ್ರತಿಯೊಂದು ಬಾಬ್ತು ಹಣಕ್ಕೆ ಅಗತ್ಯ ದಾಖಲಾತಿಗಳನ್ನು ನಿರ್ವಹಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 16–05–2008ರ ಆದೇಶ ಸಂಖ್ಯೆ: FD 1 TFP 2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾ ಯೋಜನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಶಿವಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 59

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಕೌಶಲ್ಯ ಭವನ, ಡೈರಿ ವೃತ್ತ, ಬೆಂಗಳೂರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**
1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್ ವಿ(ಜಿ)/ಸಿಟಿ/ಕ್ರೈಂ.1/2011, ದಿನಾಂಕ 17/24–02–2011.
2) ತನಿಖಾಧಿಕಾರಿಯ ವರದಿ ದಿನಾಂಕ 18–02–2011
3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
4) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್ ವಿ(ಜಿ)/ಸಿಟಿ/ಕ್ರೈಂ1/2011, ದಿನಾಂಕ 22–11–2011.

**ಪ್ರಸ್ತಾವನೆ :**

ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಕೌಶಲ್ಯ ಭವನ, ಡೈರಿ ವೃತ್ತ, ಬೆಂಗಳೂರು ಇವರ ವಿರುದ್ಧ ಗುನ್ನೆ ಸಂಖ್ಯೆ: 1/2011ರಲ್ಲಿ ಆರಕ್ಷಕ ನಿರೀಕ್ಷಕರು ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2 & 3) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 17/24–02–2011ರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.1/2011 ಇದರೊಡನೆ ಕಳುಹಿಸುತ್ತಾ, ಆಪಾದಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ–1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.1/2011, ಬೆಂಗಳೂರು ದಿನಾಂಕ 17/24–02–2011ರ ಮೂಲಕ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಬಿ. ಎನ್. ರೇವಣ್ಣಗೌಡ, ಪ್ರಾಂಶುಪಾಲರು, ಪುಷ್ಪರವಿ ನ್ಯಾಷನಲ್ ಐ.ಟಿ.ಐ. ಗಂಡಸಿ ಹ್ಯಾಂಡ್ ಪೋಸ್ಟ್ ಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ ಇವರ ಫಿರ್ಯಾದಿ ದಿನಾಂಕ 03-01-2011.
2. ಪ್ರಥಮ ವರ್ತಮಾನ ವರದಿ ಬೆಂಗಳೂರು ನಗರ ವಿಭಾಗ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 1/2011.
3. ಪ್ರಾಯೋಗಿಕ ಪಂಚನಾಮೆ ದಿನಾಂಕ 03–01–2011
4. ಟ್ರ್ಯಾಪ್‌ನ ಮಹಜರ್ ದಿನಾಂಕ 04–01–2011
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಸಾ.ಆ.ಸಂ./ರಾಪ/ಲೋಕ್/177/10–11, ದಿನಾಂಕ 13–01–2011.
6. ಕೃತ್ಯ ನಡೆದ ಸ್ಥಳದ ನಕಾಶೆ: ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಕೌಶಲ್ಯ ಭವನ, ಬನ್ನೇರುಘಟ್ಟ ರಸ್ತೆ, ಡೈರಿ ವೃತ್ತ, ಬೆಂಗಳೂರು.
7. ಈ ಕೆಳಗಿನ ಸಾಕ್ಷಿಗಳ ಹೇಳಿಕೆಗಳು:–
   1. ಶ್ರೀ ಬಿ. ಎನ್. ರೇವಣ್ಣಗೌಡ, ಪ್ರಾಂಶುಪಾಲರು, ಪುಷ್ಪರವಿ ನ್ಯಾಷನಲ್ ಐ.ಟಿ.ಐ. ಗಂಡಸಿ ಹ್ಯಾಂಡ್ ಪೋಸ್ಟ್ ಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.
   2. ಶ್ರೀ ಹೆಚ್. ಟಿ. ಗುರುರಾಜು, ಪ್ರಾಂಶುಪಾಲರು, ಪಿ.ಇ.ಎಸ್. ಐ.ಟಿ.ಐ. ಅರಕಲಗೂಡು
   3. ಶ್ರೀ ಅಬ್ದುಲ್ ಖಾದೀರ್ ಷರೀಫ್, ಪ್ರ.ದ.ಸ., ಸಾರಿಗೆ ಆಯುಕ್ತರ ಕಛೇರಿ
   4. ಶ್ರೀ ಕೆ. ಸಿ. ಸುರೇಶ್ ಕುಮಾರ್, ಕಛೇರಿ ಅಧೀಕ್ಷಕರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ

5. ಶ್ರೀ ಎಂ. ಈಶ್ವರಪ್ಪ, ತರಬೇತಿ ಅಧಿಕಾರಿ, ಟಿ.ಎಂ.ಎ.ಇ.ಎಸ್. ಐ.ಟಿ.ಐ
6. ಶ್ರೀ ಕೆ. ರಮೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು
7. ಶ್ರೀ ಬಿ. ಕೆ. ರೂಪೇಶ್ ಕುಮಾರ್, ಹಿ.ಸ. ಬೆ.ವಿ.ಕಂ. ಬೆಂಗಳೂರು
8. ಶ್ರೀ ಎಸ್. ಆರ್. ಉಮಾಶಂಕರ್, ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ
9. ಶ್ರೀ ಜಿ. ತಿಮ್ಮಯ್ಯ, ಡಿ–ಗ್ರೂಪ್ ನೌಕರ, ಉದ್ಯೋಗ ಮತ್ತು ತರಬೇತಿ ಇಲಾಖೆ
10. ಶ್ರೀ ಎಂ. ಸಂತೋಷ್, ಡಿ–ಗ್ರೂಪ್ ನೌಕರ, ಉದ್ಯೋಗ ಮತ್ತು ತರಬೇತಿ ಇಲಾಖೆ
11. ಶ್ರೀ ಅನಂತಪದ್ಮನಾಭ, ಯಗಚಿ ಐ.ಟಿ.ಐ. ಕಾಲೇಜ್
12. ಶ್ರೀ ವಿ. ಪಿ. ಈಶ್ವರ್ ನಾಯಕ್, ಜಂಟಿ ನಿರ್ದೇಶಕರು, ಉ ಮತ್ತು ತ ಇಲಾಖೆ
13. ಶ್ರೀ ಕೆ. ಆರ್. ಹಾಲಪ್ಪ ಶೆಟ್ಟಿ, ಉಪ ನಿರ್ದೇಶಕರು, ಉ ಮತ್ತು ತ ಇಲಾಖೆ
14. ಶ್ರೀ ಸಿ. ವಿ. ಚಂದ್ರೇಗೌಡ, ಕಿ.ತ.ಅ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
15. ಶ್ರೀ ಜೆ. ವೈ. ಫಯಾಜ್, ಕಿ.ತ.ಅ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
16. ಶ್ರೀ ಅನಂತಕುಮಾರ್, ಕಿ.ತ.ಅ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
17. ಶ್ರೀ ಬಿ. ಎನ್. ಪಾಲಾಕ್ಷ, ಪ್ರ.ದ.ಸ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
18. ಶ್ರಿ ಎಂ. ಪಿ. ನಟರಾಜ್, ಕಿ.ತ.ಅ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
19. ಶ್ರೀ ಡಿ. ಆರ್. ನಾಗೇಶ್, ಕಿ.ತ.ಅ. ಪುಷ್ಪರವಿ ನ್ಯಾಷನಲ್ ಐ.ಟಿ.ಐ.
20. ಶ್ರೀ ಆನಂದ್, ಕಾರ್ಯಾಗಾರ ಸಹಾಯಕರು, ಪುಷ್ಪರವಿ ನ್ಯಾಷನಲ್ ಐ.ಟಿ.ಐ.
21. ಶ್ರೀ ಎಲ್. ಆರ್. ನಂಜೇಶ್, ಡಿ–ಗ್ರೂಪ್ ನೌಕರರು, ಪುಷ್ಪರವಿ ನ್ಯಾಷನಲ್ ಐ.ಟಿ.ಐ.
22. ಶ್ರೀ ವೇದಮೂರ್ತಿ, ಕಿರಿಯ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಬೆಂಗಳೂರು.
23. ಡಾ॥ ರವಿಶಂಕರ್ ಕಾಕತ್ಕರ್, ಕರ್ನಾಟಕ ಸರ್ಕಾರದ ರಾಸಾಯನಿಕ ಪರೀಕ್ಷಕರು
24. ಶ್ರೀಮತಿ ನಾಗಶ್ರೀ, ನ್ಯಾಯಾಧೀಶರು, 17ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು
25. ಶ್ರೀ ದೇಶಿಕ, ಹೆಡ್, ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
26. ಶ್ರೀ ರಾಮಯ್ಯ, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
27. ಶ್ರೀ ಉಮೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
28. ಶ್ರೀ ಧರಣೇಶ, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
29. ಶ್ರೀ ರವಿಕುಮಾರ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
30. ಶ್ರೀಮತಿ ಮಮತ, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ
31. ಶ್ರೀ ಎಸ್. ಟಿ. ಯೋಗೇಶ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ
32. ಶ್ರೀ ನಿರಂಜನ್ ಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ
33. ಶ್ರೀ ಸುರೇಶ್ ಬಾಬು, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ
34. ಶ್ರೀ ಎಸ್. ಗಿರೀಶ್, ಪೊಲೀಸ್ ಉಪ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ
35. ಶ್ರೀ ಕೆ. ಸಿ. ಲಕ್ಷ್ಮೀನಾರಾಯಣ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ

8. ಲಂಚ ಕೇಳಲು ಆಧಾರವಾದ ಈ ಕೆಳಗಿನ ಕಡತ ಅಥವಾ ದಾಖಲೆ:
   1) ಉತಇ/ತ/ಸಂ–2/ವಿವ–52/10.11 (ಪುಷ್ಪರವಿ ನ್ಯಾಷನಲ್ ಐ.ಟಿ.ಐ. ಕಾಲೇಜಿನ 9 ಜನ ಸಿಬ್ಬಂದಿಗಳನ್ನು ವೇತನ ಸಹಾಯಾನುದಾನಕ್ಕೆ ಒಳಪಡಿಸಿ ಅನುಮೋದನೆ ನೀಡುವ ಬಗ್ಗೆ)
   2) ಆಪಾದಿತ ಅಧಿಕಾರಿ ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ) ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಸಮಜಾಯಿಷಿ ಹೇಳಿಕೆಗಳು:

ಮೇಲಿನ ದಾಖಲಾತಿಗಳನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಗಿನ ಅಂಶಗಳನ್ನು ಗಮನಿಸಿದೆ.

ತನಿಖಾಧಿಕಾರಿಗಳಾದ ಶ್ರೀ ಕೆ. ಸಿ. ಲಕ್ಷ್ಮೀನಾರಾಯಣ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳುರು ನಗರ ವಿಭಾಗ, ಬಹುಮಹಡಿ ಕಟ್ಟಡ, ಬೆಂಗಳೂರು ಇವರು ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ದಿನಾಂಕ 03–01–2011 ರಂದು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಬಹುಮಹಡಿ ಕಟ್ಟಡದ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 1/2011 ರಲ್ಲಿ ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ) ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು ಫಿರ್ಯಾದಿಯಾದ ಶ್ರೀ ಬಿ. ಎನ್. ರೇವಣ್ಣಗೌಡ, ಪ್ರಾಂಶುಪಾಲರು ಪುಷ್ಪರವಿ ನ್ಯಾಷನಲ್ ಐ.ಟಿ.ಐ. ಗಂಡಸಿ ಹ್ಯಾಂಡ್ ಪೋಸ್ಟ್ ಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ ಇವರ ಪಷ್ಪರವಿ ನ್ಯಾಷನಲ್ ಐ.ಟಿ.ಐ. ಕಾಲೇಜಿನ 9 ಜನ ಸಿಬ್ಬಂದಿಗಳನ್ನು ವೇತನ ಸಹಾಯಾನುದಾನಕ್ಕೆ ಒಳಪಡಿಸಿ ಅನುಮೋದನೆ ನೀಡಲು ರೂ. 10,75,000/–ಗಳ ಲಂಚಕ್ಕೆ ಒತ್ತಾಯಿಸಿ, ಫಿರ್ಯಾದುದಾರರು ಮಾತುಕತೆ ಮಾಡಿದ ನಂತರ ಲಂಚದ ಹಣ ರೂ. 10,00,000/–ಕ್ಕೆ ತೀರ್ಮಾನವಾಗಿ, ಈ ಪೈಕಿ ಫಿರ್ಯಾದುದಾರರಿಂದ ಈಗ್ಗೆ ಸುಮಾರು 6 ತಿಂಗಳುಗಳ ಹಿಂದೆ ಲಂಚದ ಹಣ ರೂ. 2,00,000/–ಗಳನ್ನು ಮುಂಗಡವಾಗಿ ಸ್ವೀಕರಿಸಿ, ನಂತರ ಉಳಿದ ರೂ. 8,00,000/–ಗಳನ್ನು ಆರೋಪಿ–2 ಶ್ರೀ ಸುರೇಶ್ ಕುಮಾರ್ ರವರ ಮೂಲಕ ಸ್ವೀಕರಿಸುವಾಗ ದಿನಾಂಕ 04–01–2011 ರಂದು ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಕೌಶಲ್ಯ ಭವನ, ಬನ್ನೇರುಘಟ್ಟ, ರಸ್ತೆ, ಡೈರಿ ವೃತ್ತ, ಬೆಂಗಳೂರು ಇಲ್ಲಿ

ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಆರೋಪಿ–1 ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರುರವರು ಸದರಿ ಸರ್ಕಾರಿ ಕೆಲಸದ ಸಂಬಂಧ ತಾವು ಒತ್ತಾಯ ಮಾಡಿದ ಲಂಚದ ಹಣ ಅಕ್ರಮ ಸಂಭಾವನೆಯಾದ ರೂ. 8,00,000/–ಗಳನ್ನು ಆರೋಪಿ–2 ಶ್ರೀ ಸುರೇಶ್ ಕುಮಾರ್ ರವರಿಗೆ ನೀಡುವಂತೆ ಫಿರ್ಯಾದುದಾರರಿಗೆ ತಿಳಿಸಿದ ಮೇರೆಗೆ, ಫಿರ್ಯಾದುದಾರರು ಆರೋಪಿ–2 ರವರಿಗೆ ಅವರು ಕರ್ತವ್ಯ ನಿರ್ವಹಿಸಿರುವ ಕೊಠಡಿಯಲ್ಲಿ ಲಂಚದ ಹಣವನ್ನು ನೀಡಿದಾಗ ಆರೋಪಿ–2 ರವರು ಫಿರ್ಯಾದುದಾರರಿಂದ ಲಂಚದ ಹಣ ರೂ. 8,00,000/–ಗಳನ್ನು ಸ್ವೀಕರಿಸಿ ಬೆಂಗಳೂರು ನಗರ ಪೊಲೀಸರ ಬಲೆಗೆ ನೇರವಾಗಿ ಸಿಕ್ಕಿಹಾಕಿಕೊಂಡಿರುತ್ತಾರೆ. ಆರೋಪಿ–2 ಶ್ರೀ ಸುರೇಶ್ ಕುಮಾರ್, ಕಛೇರಿ ಅಧೀಕ್ಷಕರವರ ಎರಡು ಕೈಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ ಬಣ್ಣರಹಿತನಾದ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಆರೋಪಿತರುಗಳ ಮತ್ತು ಫಿರ್ಯಾದುದಾರರ ನಡುವೆ ನಡೆದಿರುವ ವಿದ್ಯಮಾನಗಳನ್ನು ಪ್ರತ್ಯಕ್ಷ ಸಾಕ್ಷಿ ನೆರಳು ಸಾಕ್ಷಿ ಹಾಗೂ ಇತರೆ ಸಾಕ್ಷಿದಾರರು ಗಮನಿಸಿದ್ದು, ಮಹಜರು ಸಮಯದಲ್ಲಿ ಹೇಳಿಕೆಯನ್ನು ನೀಡಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 8,00,000/–ಗಳನ್ನು ಆರೋಪಿ–2, ಶ್ರೀ ಸುರೇಶ್ ಕುಮಾರ್, ಕಛೇರಿ ಅಧೀಕ್ಷಕರು ರವರಿಂದ ಅವರು ಕುಳಿತಿದ್ದ ಚೇರಿನ ಎಡಭಾಗದ ಕಬೋರ್ಡ್‌ನಲ್ಲಿಟ್ಟುಕೊಂಡಿದ್ದು, ಅದನ್ನು ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಅಲ್ಲದೆ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಉಲ್ಲೇಖಿತ(4)ರ ಪತ್ರದಲ್ಲಿ ಒದಗಿಸಿದ ಮಾಹಿತಿಯನುಸಾರ ಸರ್ಕಾರವು ಈ ಕೆಳಗಿನ ಅಂಶಗಳನ್ನು ಸಹ ಗಮನಿಸಿದೆ.

(ಅ) ಆರೋಪಿತರು ಲಂಚದ ಹಣಕ್ಕಾಗಿ ಒತ್ತಾಯಿಸಿ ಪಡೆದುಕೊಂಡಿರುವುದು ಡಿಜಿಟಲ್ ವಾಯ್ಸ್ ರೆಕಾರ್ಡಿಂಗ್‌ನಲ್ಲಿ ಇದ್ದ ಸಂಭಾಷಣೆಯಿಂದ ಹಾಗೂ ಬಟನ್ ಕ್ಯಾಮೆರಾದಲ್ಲಿನ ದೃಶ್ಯಾವಳಿಗಳಿಂದ ದೃಢಪಟ್ಟಿರುವುದು.

(ಆ) ಶ್ರೀ ಸುರೇಶ್ ಕುಮಾರ್, ಕಛೇರಿ ಅಧೀಕ್ಷಕರು ಇವರು ತಮ್ಮ ಮೇಲಾಧಿಕಾರಿ ಆರೋಪಿತರ ಪರವಾಗಿ ಲಂಚದ ಹಣವನ್ನು ಸ್ವೀಕರಿಸಿದ ಬಗ್ಗೆ ತನಿಖಾಧಿಕಾರಿ ಮುಂದೆ ಹಾಗೂ ನ್ಯಾಯಾಲಯದಲ್ಲಿ ಹೇಳಿಕೆಗಳನ್ನು ನೀಡಿರುವುದು.

(ಇ) ತನಿಖಾ ಕಾಲದಲ್ಲಿ ಸಂಗ್ರಹಿಸಿದ ಆರೋಪಿತರ ಹಾಗೂ ಫಿರ್ಯಾದುದಾರರ ಮೊಬೈಲ್ ಕರೆಗಳು ವಿವರಗಳು

(ಈ) ಆರೋಪಿತರು ಲಂಚದ ಹಣಕ್ಕಾಗಿ ಒತ್ತಾಯಿಸಿ ಸ್ವೀಕರಿಸಿರುವ ಬಗ್ಗೆ ಡಿಜಿಟಲ್ ವಾಯ್ಸ್ ರೆಕಾರ್ಡರ್ ಹಾಗೂ ಬಟನ್ ಕ್ಯಾಮೆರಾದಲ್ಲಿ ದಾಖಲಾಗಿರುವ ಧ್ವನಿ ಹಾಗೂ ದೃಶ್ಯಾವಳಿಗಳನ್ನು ಪರಿಶೀಲಿಸಿದ ಜಂಟಿ ನಿರ್ದೇಶಕರಾದ ಶ್ರೀ ವಿ. ಪಿ. ಈಶ್ವರ್ ನಾಯಕ್ ರವರು ನೀಡಿರುವ ದೃಢೀಕರಣ.

(ಉ) ತನಿಖಾ ಕಾಲದಲ್ಲಿ ಪಡೆದುಕೊಂಡ ಆರೋಪಿತರ ಮಾದರಿ ಧ್ವನಿ ಮತ್ತು ಫಿರ್ಯಾದುದಾರರು ದೂರಿನೊಂದಿಗೆ ಹಾಜರುಪಡಿಸಿದ್ದ ಡಿಜಿಟಲ್ ವಾಯ್ಸ್ ರಕಾರ್ಡಿಂಗ್ ನಲ್ಲಿನ ಆರೋಪಿತರ ಧ್ವನಿ ಒಂದಕ್ಕೊಂದು ತಾಳೆಯಾಗಿರುತ್ತವೆ ಹಾಗೂ ಈ ಸಂಬಂಧ ಎಫ್.ಎಸ್.ಎಲ್. ತಜ್ಞರು ಮೇಲ್ಕಂಡ ವಾಯ್ಸ್ ರೆಕಾರ್ಡರ್‌ಗಳಲ್ಲಿನ ಧ್ವನಿಯು ಆರೋಪಿತರ ಧ್ವನಿಗೆ ತಾಳೆಯಾಗಿರುತ್ತದೆ ಎಂದು ಸ್ಪಷ್ಟ ಅಭಿಪ್ರಾಯ ನೀಡಿರುವುದು.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ–1988 ರ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆಯೆಂದು ಸರ್ಕಾರವು ಪರಿಗಣಿಸಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988 ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ–1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಆದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 8 ಇಟಿಐ 2011, ಬೆಂಗಳೂರು, ದಿನಾಂಕ : 12–12–2011**

ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ/(ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಕೆ. ರಾಮಚಂದ್ರಪ್ಪ, ಜಂಟಿ ನಿರ್ದೇಶಕರು (ತ), ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರನ್ನು ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ. ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಪಿ.ಆರ್. 60 ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಸಹಕಾರ ಸಚಿವಾಲಯ

**ವಿಷಯ :** ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿ ಅಧಿನಿಯಮ 1961 ರಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರು ಹಾಗೂ ಲೇವಾದೇವಿ ಮಹಾನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎನ್‌ಎಂಎನ್/ವೈಎಂಸಿ/122/2010–11, ದಿನಾಂಕ 22–10–2011

**ಪ್ರಸ್ತಾವನೆ :**

ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಈ ಸಂಸ್ಥೆಯು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕೇರಳ ಇವರಿಂದ (ಸಂಖ್ಯೆ: U65929KL1997PLCO11518 ದಿನಾಂಕ 19–03–2002 ಪ್ರಕಾರ) ನೋಂದಣಿಯಾಗಿದ್ದು, ಆರ್‌ಬಿಐನ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳ ವಿಭಾಗ

ಪ್ರಾಂತೀಯ ಕಛೇರಿ ತಿರುವನಂತಪುರಂ. ಇವರಿಂದ (ಸಂಖ್ಯೆ: N-16.00170, ದಿನಾಂಕ 23-07-2002 ಪ್ರಕಾರ) ಎನ್‌ಬಿಎಫ್‌ಸಿ ಸಂಸ್ಥೆ ಎಂದು ಪ್ರಮಾಣ ಪತ್ರ ಪಡೆದಿದ್ದು, ಕರ್ನಾಟಕದಲ್ಲಿಯೂ ಸಹ ಹಣಕಾಸಿನ ವ್ಯವಹಾರಗಳನ್ನು ನಡೆಸುತ್ತಿದ್ದು ತನ್ನ ಎಲ್ಲಾ ಶಾಖೆಗಳಿಗೆ ಸಂಬಂಧಿಸಿದಂತೆ ರೂ. 18,50/- ಲಕ್ಷ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಪಾವತಿಸಿರುತ್ತದೆ. ಈಗ ಸದರಿ ಸಂಸ್ಥೆಯು ಕರ್ನಾಟಕ ಲೇವಾದೇವಿ ಅಧಿನಿಯಮ 1961 ರಿಂದ ವಿನಾಯಿತಿ ನೀಡಲು ಸರ್ಕಾರಕ್ಕೆ ದಿನಾಂಕ 27-12-2010 ರಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಪರಿಶೀಲಿಸಿ ವರದಿ ನೀಡಿರುತ್ತಾರೆ. ಈ ವರದಿಯ ಮೇರೆಗೆ ಭಾರತೀಯ ರಿಸರ್ವ್ ಬ್ಯಾಂಕ್ ಶಿಫಾರಸ್ಸಿನ ಮೇರೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961 ತಿದ್ದುಪಡಿ ತರಲು ಉದ್ದೇಶಿಸಿದ್ದು, ಇದರ ಮೇರೆಗೆ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳಿಂದ ಲೇವಾದೇವಿ ಅಧಿನಿಯಮದಿಂದ ಹೊರಗಿಡಲು ಪ್ರಸ್ತಾಪಿಸಲಾಗಿದೆ ಹಾಗೂ ಸದರಿ ಸಂಸ್ಥೆಯು ಸಾರ್ವಜನಿಕರಿಂದ ಕರ್ನಾಟಕ ಲೇವಾದೇವಿ ಅಧಿನಿಯಮದಲ್ಲಿ ನಿಗದಿಪಡಿಸಿರುವ ಬಡ್ಡಿದರಕ್ಕಿಂತ ಹೆಚ್ಚಿನ ಬಡ್ಡಿ ಪಡೆಯುತ್ತಿದ್ದಲ್ಲಿ ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇದ ಅಧಿನಿಯಮ 2004ರಡಿಯಲ್ಲಿ ಕ್ರಮ ಕೈಗೊಳ್ಳಲು ಅವಕಾಶವಿದ್ದು ಸಾರ್ವಜನಿಕರ ಹಿತಾಸಕ್ತಿ ಕಾಪಾಡುವ ಅವಕಾಶವಿರುವುದರಿಂದ ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961ರ ಪ್ರಕರಣ 2(10)(iv)(ಬಿ) ರಡಿಯಲ್ಲಿ ವಿನಾಯಿತಿ ನೀಡಬಹುದೆಂದು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಮುಂದುವರೆದು, ಸದರಿ ಸಂಸ್ಥೆಯು ಭಾರತೀಯ ರಿಸರ್ವ ಬ್ಯಾಂಕ್ ಅಧಿನಿಯಮ 1934ರ ಪ್ರಕರಣ 45IA ರಡಿಯಲ್ಲಿ ನೋಂದಣಿಯಾಗಿರುವುದರಿಂದ ಅದರ ವ್ಯವಹಾರಗಳು ಆರ್‌ಬಿಐ ನಿಂದ ನಿಯಂತ್ರಣಕ್ಕೊಳಪಡುತ್ತವೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 23 ಸಿಎಂಎಲ್ 2011, ದಿನಾಂಕ 23-11-2011**

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಲೇವಾದೇವಿ ಅಧಿನಿಯಮ 1961ರ ಪ್ರಕರಣ (2)ರ ಖಂಡ 10ರ ಉಪಖಂಡ (iv)ರ ಐಟಂ (ಬಿ) ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಈ ಸಂಸ್ಥೆಯು ಸದರಿ ಐಟಂನ ಉಪಬಂಧದಿಂದ ಮುಂದಿನ ಆದೇಶದವರೆಗೆ ಈ ಕೆಳಗಿನ ಷರತ್ತುಗಳಿಗೊಳಪಟ್ಟು ವಿನಾಯಿತಿ ನೀಡಲಾಗಿದೆ.

1. ಸಾರ್ವಜನಿಕರಿಂದ/ಗ್ರಾಹಕರಿಂದ ಗಂಭೀರ ದೂರು ದಾಖಲಾಗಿ ಅಧಿಕ ಬಡ್ಡಿ ಪಡೆಯುತ್ತಿರುವುದು ಕಂಡುಬಂದಲ್ಲಿ ನೀಡಲಾದ ವಿನಾಯಿತಿಯನ್ನು ವಾಪಸ್ಸು ಪಡೆಯಲಾಗುವುದು.
2. ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇಧ ಅಧಿನಿಯಮ 2004 ಅನ್ನು ಅನುಸರಿಸುವುದು
3. ದಿನಾಂಕ 31-3-2011ರ ಅಂತ್ಯಕ್ಕೆ ಸರ್ಕಾರಕ್ಕೆ ಪಾವತಿಸಿರುವ ಭದ್ರತಾ ಠೇವಣಿ ರೂ. 18,50/- ಲಕ್ಷ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 61

## ಸಹಕಾರ ಸಚಿವಾಲಯ

**ವಿಷಯ :** ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಇದರ 2008-09,2009-10, 2010-11ನೇ ಸಾಲುಗಳ ವಾರ್ಷಿಕ ಸರ್ವ ಸದಸ್ಯರ ಮಹಾ ಸಭೆ ನಡೆಸಲು ಕಾಲಾವಕಾಶ ನೀಡುವ ಬಗ್ಗೆ.

**ಓದಲಾಗಿದೆ :** 1) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ ಡಿಎಸ್‌ಕೆ-ಇಎಸ್ ಟಿಎಸ್-ಎಜಿಎಂ-118-2010-11, ದಿನಾಂಕ 13-07-2011.

2) ಸಹಕಾರ ಸಂಘಗಳ ಅಪರ ನಿಬಂಧಕರವರ ಪತ್ರ ಸಂಖ್ಯೆ:ಅನಿ-ಕೈ.ಸ.ಸಂ.-2-164-ವಾಸ-2011-12, ದಿನಾಂಕ 21-09-2011.

**ಪ್ರಸ್ತಾವನೆ :**

ಮೇಲೆ ಓದಲಾದ 1 ರಲ್ಲಿನ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರು, ಪ್ರಸ್ತುತ ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ದೊಡ್ಡಬಾತಿ. ಇದರ ಆರ್ಥಿಕ ಪರಿಸ್ಥಿತಿಯು ಕ್ಲಿಷ್ಟಕರವಾಗಿದ್ದು, ದಿನಾಂಕ 31-03-2011ಕ್ಕೆ ಅಂದಾಜು ರೂ. 74.00 ಕೋಟಿಗಳಷ್ಟು ನಷ್ಟವಿರುತ್ತದೆ. ಕಾರ್ಖಾನೆಯನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಗಿದೆ. ಆದರೆ ಗುತ್ತಿಗೆದಾರರು ಮುಂಗಡ ಗುತ್ತಿಗೆ ಹಣ ಪಾವತಿಸಿರುವುದಿಲ್ಲ. ಆದ ಕಾರಣ ಕಾರ್ಖಾನೆಗೆ ಆದಾಯದ ಕೊರತೆ ಇರುತ್ತದೆ. ಕಾರ್ಖಾನೆಯು ಸಿಬ್ಬಂದಿಯನ್ನು ಗುತ್ತಿಗೆದಾರರ ವಶಕ್ಕೆ ನೀಡಿರುವುದರಿಂದ ಕೆಲವೇ ಸಿಬ್ಬಂದಿಯವರಿಂದ ದೈನಂದಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. ಕಾರ್ಖಾನೆಯು 2006-07ನೇ ಸಾಲಿನಿಂದ 2010-11ನೇ ಸಾಲುಗಳವರೆಗಿನ ಲೆಕ್ಕ ಪರಿಶೋಧನಾ ಕಾರ್ಯಪೂರ್ಣಗೊಂಡಿಲ್ಲ. ಕಾರ್ಖಾನೆಯ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಸಾಕಷ್ಟು ವೆಚ್ಚವಾಗಲಿದ್ದು, ಈ ಖರ್ಚುಗಳನ್ನು ಭರಿಸಲು ಕಾರ್ಖಾನೆಯಲ್ಲಿ ಆರ್ಥಿಕ ಲಭ್ಯತೆ ಇರುವುದಿಲ್ಲ. ಆದ್ದರಿಂದ 2008-09, 2009-10 ಹಾಗೂ 2010-11ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು ನಡೆಸಲು ಇನ್ನು 3 ವರ್ಷಗಳ ಕಾಲ, ಕಾಲಾವಕಾಶ ನೀಡುವಂತೆ ದಿನಾಂಕ 31-05-2011 ರಂದು ನಡೆದ ಕಾರ್ಖಾನೆಯ ವಿಶೇಆಧಿಕಾರಿಗಳ ಸಭೆಯು ತೀರ್ಮಾನಿಸಲಗಿದೆ. ಕಾರ್ಖಾನೆಯ ಆರ್ಥಿಕ ಪರಿಸ್ಥತಿಯ ಹಿನ್ನೆಲೆಯಲ್ಲಿ ಕಾರ್ಖಾನೆಯ 2008-09, 2009-10, 2010-11ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ನಡೆಸಲು ಇನ್ನು ಮೂರು ವರ್ಷಗಳ ಕಾಲಾವಧಿಗೆ ವಿಸ್ತರಿಸುವುದು ಸಮಂಜಸವಾಗಿದ್ದು, ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಮೇಲೆ ಓದಲಾದ 2ರಲ್ಲಿನ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು, ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 32 ಸಸಕಾ 2010 ಬೆಂಗಳೂರು, ದಿನಾಂಕ 21/25–11–2011**

ಪ್ರಸ್ತಾವನೆಯಲ್ಲಿನ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಇದರ 2008–09, 2009–10, 2010–11ನೇ ಸಾಲಿನ ವಾರ್ಷಿಕ ಮಹಾ ಸಭೆಗಳನ್ನು 2011–12ನೇ ಸಾಲಿನ ವಾರ್ಷಿಕ ಮಹಾ ಸಭೆಯೊಂದಿಗೆ ಜರುಗಿಸಲು ದಿನಾಂಕ 30–09–2012ರ ವರೆಗೆ ವಿಸ್ತರಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1) ಹಾಗೂ ಕಲಂ 121(1) ರಡಿಯಲ್ಲಿ ಕಾಲಾವಕಾಶ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30–09–2012ರವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲಿದ್ದಂತೆ ಪ್ರಕರಣ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 62

## ಸಹಕಾರ ಸಚಿವಾಲಯ

**ವಿಷಯ :** ಆರ್.ಐ.ಡಿ.ಎಫ್–XVI & XVನೇ ಯೋಜನೆಯಡಿಯಲ್ಲಿ ಗೋದಾಮು ನಿರ್ಮಾಣ ಕಾಮಗಾರಿಗಳಿಗೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅದೇಶ ಸಂಖ್ಯೆ: ಸಇ 43 ರಾಉನಿ 2009, ದಿನಾಂಕ 03–01–2011

**ಪ್ರಸ್ತಾವನೆ :**

ಮೇಲೆ ಓದಲಾದ ಅದೇಶದಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಆರ್.ಐ.ಡಿ.ಎಫ್–XIV & XVನೇ ಯೋಜನೆಯಡಿ ಗೋದಾಮು ನಿರ್ಮಾಣ ಕಾಮಗಾರಿಗಳಿಗೆ 2010–11ನೇ ಸಾಲಿನ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನದಿಂದ ರೂ. 800.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ: "6408–02–190–1–01–436–ಸಾಲ (ಯೋಜನೆ)" ಯಡಿ ಬಿಡುಗಡೆ ಮಾಡಿದ್ದು ಅದರಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಸರ್ಕಾರಕ್ಕೆ ಮರು ಪಾವತಿ ಮಾಡಬೇಕಾದ ಅಸಲು ಕಂತಿನಮೊತ್ತ ರೂ. 1,95,77,000–00 (ಒಂದು ಕೋಟಿ ತ್ತೊಂಭತ್ತೈದು ಲಕ್ಷದ ಎಪ್ಪತ್ತೇಳು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ: "6408–02–190–0–01–436–ಸಾಲ (ಯೋಜನೆ)" ಇದರಡಿ ಹೊಂದಾಣಿಕೆ ಮಾಡಿಕೊಳ್ಳಲು ತಿಳಿಸಲಾಗಿತ್ತು. ಸದರಿ ಲೆಕ್ಕ ಶೀರ್ಷಿಕೆಯು ತಪ್ಪಾಗಿ ನಮೂದಾಗಿದ್ದರಿಂದ ಅಸಲನ್ನು ದಿನಾಂಕ 31–03–2011ರ ಒಳಗಾಗಿ ಹೊಂದಾಣಿಕೆ ಮಾಡಲಾಗಲಿಲ್ಲವೆಂದು ಕರ್ನಾಟಕ ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ 16–07–2011ರ ಪತ್ರದಲ್ಲಿ ತಿಳಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸಇ 43 ರಾಉನಿ 2009 (ಭಾಗ–1) ಬೆಂಗಳೂರು, ದಿನಾಂಕ 20–08–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಆರ್.ಐ.ಡಿ.ಎಫ್–XIV & XVನೇ ಯೋಜನೆಯಡಿಯಲ್ಲಿ ಗೋದಾಮು ನಿರ್ಮಾಣ ಕಾಮಗಾರಿಗಾಗಿ 2011–12ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "6408–02–190–1–01–436–ಸಾಲ (ಯೋಜನೆ)" ಯಡಿಯಲ್ಲಿ ಅವಕಾಶ ಮಾಡಿರುವ ರೂ. 15.00 ಕೋಟಿಗಳ ಅನುದಾನದಲ್ಲಿ ರೂ. 334.64 ಲಕ್ಷಗಳನ್ನು ಈ ಕೆಳಕಂಡ ರೀತಿಯಲ್ಲಿ ಹಾಗೂ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

(1) ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಸರ್ಕಾರಕ್ಕೆ ಮರು ಪಾವತಿ ಮಾಡಬೇಕಾದ ಸಾಲದ ಮೇಲಿನ ಬಡ್ಡಿಯ ಮೊತ್ತವಾಗಿ ರೂ. 334.64 (ಮುನ್ನೂರ ಮೂವತ್ತ ನಾಲ್ಕು ಲಕ್ಷದ ಅರವತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳನ್ನು ಲೆಕ್ಕ ಶೀರ್ಷಿಕೆ "0049–04–190–0–09" ಕ್ಕೆ ಪುಸ್ತಕ ಹೊಂದಾಣಿಕೆ ಮಾಡುವುದು.

(2) ಯೋಜನೆಯಡಿ ಬಿಡುಗಡೆ ಮಾಡಲಾದ ಹಣವನ್ನು ನಬಾರ್ಡ್ ಸಂಸ್ಥೆಯು ಸಾಲಕ್ಕೆ ನೀಡುವ ಷರತ್ತು ಮತ್ತು ನಿಬಂಧನೆಗಳಂತೆಯೇ ಹಾಗೂ ಬೇರೆ ಯಾವುದೇ ಇನ್ನಿತರ ಯೋಜನೆಗೆ ಬಳಸದೇ ಉದ್ದೇಶಿತ ಕಾಮಗಾರಿಕೆಗಳಿಗೆ ಮಾತ್ರ ಬಳಸತಕ್ಕದ್ದು.

(3) ಇನ್ನು ಮುಂದೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಈ ಹಿಂದಿನ ಆರ್.ಐ.ಡಿ.ಎಫ್.–XIV & XVನೇ ಯೋಜನೆಯಡಿ ಬಿಡುಗಡೆ ಮಾಡಿರುವ ಸಾಲ ಮತ್ತು ಅದರ ಮೇಲಿನ ಬಡ್ಡಿಯನ್ನು ದಿನಾಂಕ 31–12–2011 ರೊಳಗಾಗಿ ಮರುಪಾವತಿ ಮಾಡುವ ಷರತ್ತಿಗೆ ಒಳಪಟ್ಟಿರುತ್ತದೆ.

(4) ಸಾಲ ಮತ್ತು ಬಡ್ಡಿ ಮರುಪಾವತಿಯ ಬಗ್ಗೆ ಸರ್ಕಾರಕ್ಕೆ ಖಚಿತ ಮಾಹಿತಿಯನ್ನು ನೀಡತಕ್ಕದ್ದು

(5) ಪ್ರಧಾನ ಮಹಾಲೇಖಪಾಲ (ಹಕ್ಕು ಮತ್ತು ಲೆಕ್ಕ) ರವರು ಈ ಲೆಕ್ಕ ಹೊಂದಾಣಿಕೆಯನ್ನು 2011–12ನೇ ಸಾಲಿನ ಸರ್ಕಾರದ ಪುಸ್ತಕದಲ್ಲಿ ಮಾಡಬೇಕೆಂದು ಕೋರಲಾಗಿದೆ.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 290 ವೆಚ್ಚ–2, 2011, ದಿನಾಂಕ 02–08–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಹಕಾರ ಇಲಾಖೆ

ಪಿ.ಆರ್. 63

## ಸಹಕಾರ ಸಚಿವಾಲಯ

**ವಿಷಯ :** ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಬೆಳಗಾವಿ ಇದರ 2008–09, 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಸಾಮಾನ್ಯ ಸಭೆಯನ್ನು ಜರುಗಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 04 ಸಸಕಾ 2010, ದಿನಾಂಕ 07–05–2010, 04–08–2010 ಮತ್ತು 15–02–2011.

2) ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಬೆಳಗಾವಿ ಇದರ ಅಧ್ಯಕ್ಷರ ಪತ್ರ ಸಂಖ್ಯೆ: ಎಂಸಿಎಸ್ಎಂ/ವಾ.ಮ.ಸಭೆ/2011–12/67, ದಿನಾಂಕ 25–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೆಳಗಾವಿ ಇದರ 2008–09, 2009–10 ಮತ್ತು 2010–11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–09–2011ರ ಒಳಗಾಗಿ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೆಳಗಾವಿ ಇವರು ತಮ್ಮ ಪತ್ರದಲ್ಲಿ ಕಾರ್ಖಾನೆಯ ಕೆಲಸವನ್ನು ಪೂರ್ತಿಗೊಳಿಸುವ ಕೆಲಸ ತೀವ್ರಗತಿಯಲ್ಲಿ ಜರುಗಿದ್ದು ಅಲ್ಲದೇ ಕಾರ್ಖಾನೆಯ ಕಾರ್ಯಕ್ಷೇತ್ರದಲ್ಲಿ ಇತ್ತೀಚಿನ ಅತಿವೃಷ್ಟಿಯಿಂದಾಗಿ ಬಹುತೇಕ ಎಲ್ಲಾ ಹಳ್ಳಿಗಳ ಜಮೀನುಗಳು ಜಲಾವೃತವಾಗಿದ್ದು ರಸ್ತೆ ಸಂಪರ್ಕ ಸಹ ಕಡಿದುಹೋಗಿದೆ ಹಾಗೂ ಇನ್ನೂ ಮಳೆ ಮುಂದುವರೆಯುವ ಸಂಭವವಿದೆಯೆಂದು ಈ ಕಾರಣದಿಂದಾಗಿ 2008–09, 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ಇನ್ನೂ ಆರು ತಿಂಗಳ ಅವಧಿಗೆ ಅಂದರೆ ದಿನಾಂಕ 31–03–2012ರ ಒಳಗಾಗಿ ಜರುಗಿಸಲು ಅನುಮತಿ ನೀಡಬೇಕೆಮದು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 15 ಸಸಕಾ 2011, ದಿನಾಂಕ 19–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೆಳಗಾವಿ ಇದರ 2008–09, 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ 31–03–2012ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ. ಇನ್ನು ಮುಂದೆ ಯಾವುದೇ ತರಹದ ವಿಸ್ತರಣೆ ನೀಡಲಾಗುವುದಿಲ್ಲವೆಂದು ಸ್ಪಷ್ಟೀಕರಿಸಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–03–2012ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 64

## ಸಹಕಾರ ಸಚಿವಾಲಯ

### ತಿದ್ದುಪಡಿ ಅದೇಶ

ಸಂಖ್ಯೆ: ಸಇ 134 ಸಂಮಾಸ 2011, ಬೆಂಗಳೂರು, ದಿನಾಂಕ 16–11–2011

ಸರ್ಕಾರಿ ಆದೇಶ ಸಂಖ್ಯೆ: ಸಇ 134 ಸಂಮಾಸ 2011, ದಿನಾಂಕ 15–10–2011ರ ಅದೇಶದ ಕಂಡಿಕೆ 2ರ ನಂತರ ಈ ಕೆಳಕಂಡ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

"ಬಿಡುಗಡೆ ಮಾಡಲಾದ ಮೊತ್ತವನ್ನು ಖಜಾನೆಯಿಂದ ಡ್ರಾ ಮಾಡಿ ನಿರ್ಮಿತ ಕೇಂದ್ರ ಭದ್ರಾವತಿ, ಇದಕ್ಕೆ ನೀಡಲು ಆದೇಶಿಸಲಾಗಿದೆ"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 65

## ಸಹಕಾರ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಇ 43 ರಾಉನಿ 2009 ಭಾ–1, ಬೆಂಗಳೂರು, ದಿನಾಂಕ : 13–09–2011**

ಸರ್ಕಾರಿ ಆದೇಶ ಸಂಖ್ಯೆ : ಸಇ 43 ರಾಉನಿ 2009 ಭಾ–1, ದಿನಾಂಕ : 20–08–2011ರ ಆದೇಶ ಭಾಗದ ಕಂಡಿಕೆ 1ರ ಉಪ ಕಂಡಿಕೆ (5) ನಂತರ 2ನೇ ಕಂಡಿಕೆಯಾಗಿ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

"ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಬೆಂಗಳೂರು ಇವರು ಹಣ ಸಂದಾಯ ಸ್ವೀಕೃತಿಯ ಮೇಲೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ, ಬೆಂಗಳೂರು ಇವರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಪಾವತಿ ರಸೀದಿ ಹಾಗೂ ಟಿ.ಟಿ.ಆರ್. ಹೊಂದಾಣಿಕೆ ಮಾಡತಕ್ಕದ್ದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 66 ಸಹಕಾರ ಇಲಾಖೆ

## HORTICULTURE SECRETARIAT

**Sub:** Release of State share for National Horticulture Mission (NHM) programme during 2011-12-reg.

***Read:***
1. Government Order No. HCD 30 HPP 2011, dated : 23-08-2011.
2. Corrigendum No. HCD 30 HPP 2011 dated 27-08-2011.
3. Government Order No. HCD 30 HPP 2011, dated : 29-08-2011.
4. Government of India letter No. 18-89/2009-NHM dated : 02-11-2011.
5. Letter of Director of Horticulture No. ಮಿನಿ/ಕರಾತೋಮಿಎ/ವಿನಿ–1/48/2011-12 dated : 10-11-2011.
6. Letter of Director of Horticulture No. ಮಿನಿ/ಕರಾತೋಮಿಎ/ವಿನಿ–1/48/2011-12 dated : 25-11-2011.

**PREAMBLE:**

1. An amount of Rs. 2500.00 lakhs has been earmarked in the budget during 2011-12 under the State Sector Scheme namely, "State share for National Horticulture Mission", Head of Account 2401-00-800-2-30 (plan) towards the State share required for the National Horticulture Mission Programme and Rs. 876.455 lakhs (796.875 + 79.580) has been released to the Director of Horticulture towards the matching State share vide Government Order read at (1) (2) and (3) above.
2. Government of India has now conveyed the sanction to the payment of the second installment of Central share of Rs. 3100.00 lakhs under National Horticulture Mission (NHM) during 2011-12 vide Government of India letter read at (4) above.
3. The Director of Horticulture has requested the Government vide his letter read at (5) and (6) above to release matching State share.
4. The proposal of the Director of Horticulture has been examined and hence this order ;

**GOVERNMENT ORDER NO. HCD 30 HPP 2011, BANGALORE, DATED: 13-12-2011.**

Government is pleased to release to the Director of Horticulture an amount of Rs. 687.745 lakhs (Rupees Six Hundred Eighty Seven Lakhs and Seventy Four Thousand five Hundred only) under the Head of Account 2401-00-800-2-30 towards the matching State share of National Horticulture Mission programme as detailed below ;

(Rs. in Lakhs)

| Object Code | Amount Released |
|---|---|
| 059 - Other Expenses | 137.549 |
| 133 - Special Development Plan | 275.098 |
| 422 - Special Component Plan | 137.549 |
| 423 - Tribal Sub Plan | 137.549 |
| **Total** | **687.745** |

This order is issued with the concurrence of Internal Financial Advisor, Agriculture and Horticulture Department Note No. ಕೃತೋಇ 36 ಆಂಆಸ 2011 dated : 07-12-2011.

By Order and in the name of the Governor of Karnataka

**B.C. PRAKASH**

Under Secretary to Government,

Horticulture Department.

PR No. 67

**ಶಿಕ್ಷಣ ಸಚಿವಾಲಯ**

**ವಿಷಯ :–** ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಅನುದಾನಿತ ಬೋಧಕ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ:ಇಡಿ 50 ಎಸ್‌ಇಪಿ 2008 ದಿನಾಂಕ:25–03–2008.
2. ಸರ್ಕಾರದ ಆದೇಶ ಸಂಖ್ಯೆ:ಇಡಿ 77 ಎಸ್‌ಇಪಿ 2007 (ಭಾಗ) ದಿನಾಂಕ: 31–03–2008.
3. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರ ಪತ್ರ ಸಂಖ್ಯೆ: ಡಿಡಿ/ಉಹುತುಂಅನು/401/2008–09 ದಿನಾಂಕ: 13–04–2011.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿಧನ, ನಿವೃತ್ತಿ, ರಾಜಿನಾಮೆ ಮತ್ತು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದ ಬಡ್ತಿಯಿಂದ ತೆರವಾದ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಉದ್ದೇಶಕ್ಕಾಗಿ ಏಕ ಗವಾಕ್ಷಿ ಪದ್ಧತಿಯ ಮುಖಾಂತರ ರಾಜ್ಯದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಇಂತಹ 401 ಖಾಲಿ ಇರುವ ಬೋಧಕರ ಹುದ್ದೆಗಳನ್ನು ಗುರುತಿಸಲಾಗಿತ್ತು. ಸದರಿ ಹುದ್ದೆಗಳನ್ನು ತುಂಬಲು ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೆಲವುಮೋದು ಷರತ್ತುಗಳಿಗೊಳಪಟ್ಟು ಸರ್ಕಾರದ ಆದೇಶವನ್ನು ಹೊರಡಿಸಲಾಗಿತ್ತು.

ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ, ಈಗಾಗಲೇ ಅನುಮತಿ ನೀಡಿದ 401 ಬೋಧಕ ಹುದ್ದೆಗಳ ಪೈಕಿ 212 ಹುದ್ದೆಗಳನ್ನು ತುಂಬಲು ಅನುಮತಿ ನೀಡಲಾಗಿದೆ. ಈ ಹುದ್ದೆಗಳನ್ನು ತುಂಬಲು ವಿಧಿಸಲಾದ ಷರತ್ತುಗಳನ್ನು ಪೂರೈಸದ ಕಾರಣದಿಂದ ಇನ್ನುಳಿದ 189 ಹುದ್ದೆಗಳನ್ನು ತುಂಬಲು ಸಾಧ್ಯವಾಗಿರುವುದಿಲ್ಲ ಎಂಬ ಅಂಶವನ್ನು ಅವಗಾಹನೆಗೆ ತರುತ್ತಾ, ದಿನಾಂಕ : 01–07–2008 ರಿಂದ ದಿನಾಂಕ :31–12–2011 ರ ವರೆಗೆ ಖಾಲಿಯಾಗಲಿರುವ ಬೋಧಕ ಹುದ್ದೆಗಳನ್ನು ತುಂಬಿಕೊಳ್ಳಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರ ಹುದ್ದೆಗಳು ಮೇಲಿನ ಕಾರಣಗಳಿಂದ ಖಾಲಿ ಆಗಿರುವುದರಿಂದ ವಿದ್ಯಾರ್ಥಿಗಳ ಕಲಿಕೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವುದನ್ನು ತಪ್ಪಿಸುವ ಉದ್ದೇಶದಿಂದ ಇಂತಹ ಹುದ್ದೆಗಳನ್ನು ತುಂಬಲು ಅನುಮತಿ ನೀಡಲು ನಿರ್ಧರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 16 ಟಿಪಿಯು 2011, ಬೆಂಗಳೂರು, ದಿನಾಂಕ:30/09/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ :ಇಡಿ 77 ಎಸ್‌ಇಪಿ 2007(ಭಾಗ) ದಿನಾಂಕ : 31–03–2008 ರಲ್ಲಿ ಈಗಾಗಲೇ ತುಂಬಲು ಅನುಮತಿ ನೀಡಲಾಗಿದ್ದ 401 ಖಾಲಿ ಹುದ್ದೆಗಳ ಪೈಕಿ ವಿವಿಧ ಕಾರಣದಿಂದ ತುಂಬದೇ ಬಾಕಿ ಇರುವ 189 ಹುದ್ದೆಗಳನ್ನು ಮತ್ತು ದಿನಾಂಕ : 01–07–2008 ರ ನಂತರ ನಿಧನ, ನಿವೃತ್ತಿ, ರಾಜೀನಾಮೆ, ಸಕ್ಷಮ ಪ್ರಾಧಿಕಾರದಿಂದ ಅನುಮೋದಿತವಾದ ಬಡ್ತಿ ಮೂಲಕ ತೆರವಾದ ಮತ್ತು ಇತರ ಕಾರಣಗಳಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆರ್ಥಿಕ ಮಿತವ್ಯಯ ಆದೇಶವನ್ನು ಸಡಿಲಿಸಿ, ಅನುಮತಿ ನೀಡಲಾಗಿದೆ.

1) ಸರ್ಕಾರದ ಆದೇಶ ಸಂಖ್ಯೆ :ಇಡಿ 77 ಎಸ್‌ಇಪಿ 2007(ಭಾಗ) ದಿನಾಂಕ :31–03–2008 ರಲ್ಲಿನ ಷರತ್ತುಗಳನ್ನು ಪೂರೈಸತಕ್ಕದ್ದು.
2) ಖಾಲಿ ಹುದ್ದೆಯು ಅನುದಾನಿತ ಪದವಿ ಪೂರ್ವ ಕಾಲೇಜಿನ ಅನುದಾನಿತ ಹುದ್ದೆಯಾಗಿರತಕ್ಕದ್ದು.
3) ಪದವಿ ಪೂರ್ವ ಶಿಕ್ಷಣ (ನೋಂದಣಿ, ಮಾನ್ಯತೆ, ಆಡಳಿತ, ಸಹಾಯಾನುದಾನ ಇತರೇ) ನಿಯಮಗಳು, 2006 ಮತ್ತು ಕರ್ನಾಟಕ ಶಿಕ್ಷಣ ಕಾಯ್ದೆ 1983 ರಲ್ಲಿನ ಸೂಚನೆಗಳನ್ವಯ ಅಭ್ಯರ್ಥಿಗಳ ಆಯ್ಕೆ ಪ್ರಕ್ರಿಯೆ ನಡೆಸಿರುವುದನ್ನು ಖಚಿತಪಡಿಸಿಕೊಂಡ ನಂತರವೇ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರು ನೇಮಕಾತಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.
4) ವಿದ್ಯಾರ್ಥಿಗಳ ದಾಖಲಾತಿ/ಹಾಜರಾತಿಯು ನಿಯಮಾನುಸಾರ ಇರತಕ್ಕದ್ದು.
5) ಸಹಾಯಾನುದಾನದ ಷರತ್ತುಗಳನ್ನು ಸರಿಯಾಗಿ ಪಾಲಿಸಲಾಗುತ್ತಿದೆಯೇ ಎಂಬುದನ್ನು ನೋಡಲು ವರ್ಷಕ್ಕೊಮ್ಮೆ ಔಪಚಾರಿಕವಾಗಿ ಮತ್ತು ವರ್ಷಕ್ಕೊಮ್ಮೆ ಅನಿರೀಕ್ಷಿತವಾಗಿ ಪ್ರತಿಯೊಂದು ಅನುದಾನಿತ ಪದವಿ ಪೂರ್ವ ಕಾಲೇಜುಗಳ ಪರಿವೀಕ್ಷಣೆ ನಡೆಸತಕ್ಕದ್ದು.
6) ಆಯವ್ಯಯದ ಲಭ್ಯತೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು.
7) ಸರ್ಕಾರದ ಆದೇಶ ಸಂಖ್ಯೆ :ಇಡಿ 77 ಎಸ್‌ಇಪಿ 2007 (ಭಾಗ) ದಿನಾಂಕ :30–03–2008 ರಲ್ಲಿ ತುಂಬಲು ಅನುಮತಿ ನೀಡಲಾದ 401 ಹುದ್ದೆಗಳಲ್ಲಿ ವಿವಿಧ ಕಾರಣಗಳಿಂದ ತುಂಬದೇ ಇರುವ 189 ಖಾಲಿ ಹುದ್ದೆಗಳೂ ಸೇರಿದಂತೆ ದಿನಾಂಕ :01–07–2008 ರ ನಂತರ ವಿವಿಧ ಕಾರಣಗಳಿಂದ ಖಾಸಗಿ ಅನುದಾನರಹಿತ ಪದವಿ ಪೂರ್ವ ಕಾಲೇಜುಗಳಲ್ಲಿ ತೆರವಾದ ಬೋಧಕ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರು ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ. ಈ ಅಧಿಕಾರವನ್ನು ಸದರಿ ಅಧಿಕಾರಿಗಳೇ ಸ್ವತಃ ಚಲಾಯಿಸತಕ್ಕದ್ದು ಹಾಗೂ ಅದನ್ನು ಅವರು ಯಾವುದೇ ಇತರೆ ಅಧಿಕಾರಿಗಳಿಗೆ ಪ್ರತ್ಯಾಯೋಜಿಸತಕ್ಕದ್ದಲ್ಲ.
8) ನೇಮಕಾತಿ ಅನುಮೋದನೆ ನೀಡಿದ ಸರ್ಕಾರದ ಆದೇಶದ ಪ್ರತಿಯನ್ನು ಮಾಹಿತಿಗಾಗಿ ಆರ್ಥಿಕ ಇಲಾಖೆಗೆ ಕಡ್ಡಾಯವಾಗಿ ಕಳುಹಿಸತಕ್ಕದ್ದು.
9) ಕರ್ನಾಟಕ ಶಿಕ್ಷಣ ಕಾಯ್ದೆ 1983 ರಲ್ಲಿನ ಸೂಚನೆಗಳನ್ನು ಮತ್ತು ಸದರಿ ಕಾಯ್ದೆಯಡಿ ರಚಿಸಲಾದ ಪದವಿ ಪೂರ್ವ ಶಿಕ್ಷಣ (ನೋಂದಣಿ, ಮಾನ್ಯತೆ, ಆಡಳಿತ, ಸಹಾಯಾನುದಾನ ಇತರೆ) ನಿಯಮಗಳು, 2006 ಮತ್ತು ಸಂಬಂಧಿಸಿದ ಇತರ ನಿಯಮಗಳು ಹಾಗೂ ಸರ್ಕಾರದ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿನ ಖಾಲಿ ಹುದ್ದೆಗಳನ್ನು ತುಂಬಿಕೊಳ್ಳಲು ಅನುಬಂಧ–1 ರಲ್ಲಿನ ಪಟ್ಟಿ–1 ಮತ್ತು 2 ರಂತೆ ಮಾನದಂಡಗಳನ್ನು ಪೂರೈಸಿರುವ ಬಗ್ಗೆ ಮಾಹಿತಿ/ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಪೂರ್ವಾನುಮತಿಯನ್ನು ಪಡೆದುಕೊಳ್ಳತಕ್ಕದ್ದು. ಹೀಗೆ ಪೂರ್ವಾನುಮತಿ ಪಡೆದ ಹುದ್ದೆಗಳ ಆಯ್ಕೆ ಪ್ರಕ್ರಿಯೆಯನ್ನು ಪದವಿ ಪೂರ್ವ ಶಿಕ್ಷಣ (ನೋಂದಣಿ, ಮಾನ್ಯತೆ, ಆಡಳಿತ,

ಸಹಾಯಾನುದಾನ ಇತರೆ) ನಿಯಮಗಳು, 2006 ನಿಯಮ 15, 16 ಮತ್ತು 17 ರನ್ವಯ ನಡೆಸಿ, ಅನುದಾನಕ್ಕೆ ಒಳಪಡಿಸಲು ಅನುಬಂಧ–2 ರಲ್ಲಿ ನಿಗದಿಪಡಿಸಲಾದ ಚೆಕ್‌ಲಿಸ್ಟ್‌ನಲ್ಲಿನ ಮಾಹಿತಿಯೊಂದಿಗೆ ಪೂರ್ಣ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ :ಆಇ 528 ವೆ–8/2011 ದಿನಾಂಕ :28–07–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಎಸ್.ಹೆಚ್.ಕುರಿಯವರ್),
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪದವಿ ಪೂರ್ವ)

## ಅನುಬಂಧ–1

(ಸರ್ಕಾರದ ಆದೇಶ ಸಂಖ್ಯೆ:ಇಡಿ 16 ಟಿಪಿಯು 2011 ದಿನಾಂಕ:30–09–2011)

ಅನುದಾನಿತ ಖಾಸಗಿ ಪದವಿ ಪೂರ್ವ ಕಾಲೇಜುಗಳಲ್ಲಿ ನಿವೃತ್ತಿ, ರಾಜೀನಾಮೆ, ಬಡ್ತಿ, ಮರಣ ಇತ್ಯಾದಿಯ ಕಾರಣಗಳಿಗಾಗಿ ಉದ್ಭವಿಸಿರುವ ಅಥವಾ ಉದ್ಭವಿಸುವ ಅನುದಾನಿತ ಖಾಲಿ ಹುದ್ದೆಗಳನ್ನು ಮಿತವ್ಯಯ ಆದೇಶಗಳನ್ನು ಸಡಿಲಿಸಿ ತುಂಬಿಕೊಳ್ಳಲು ಹಾಗೂ ಅದಕ್ಕೆ ಅನುದಾನಸಹಿತ ಅನನೆ ಪಡೆಯಲು ಉದ್ದೇಶಿಸಿದ ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳು ಈ ಕೆಳಕಂಡ ಪಟ್ಟಿ–1 ರಲ್ಲಿ ಒಳಗೊಂಡ ಷರತ್ತು/ನಿಬಂಧನೆಗಳನ್ನು ಪೂರೈಸತಕ್ಕದ್ದು ಮತ್ತು ಪಟ್ಟಿ–2 ರಲ್ಲಿ ಒಳಗೊಂಡ ಮಾನದಂಡಗಳನ್ನು ಈ ಅನುಬಂಧದನ್ವಯ ನಿಗದಿಪಡಿಸಿದ ಕನಿಷ್ಟ ಮಟ್ಟಿಗಾದರೂ ಪೂರೈಸತಕ್ಕದ್ದು.

### ಪಟ್ಟಿ–1

ಕ್ರಮ ಸಂಖ್ಯೆ:01 ರಿಂದ 05 ರ ವರೆಗೆ ನಮೂದಿಸಿದ ಮಾನದಂಡಗಳು ಕಡ್ಡಾಯವಾಗಿ ಅನ್ವಯವಾಗುತ್ತವೆ. (non-negotiable norms):

<table>
<tr><th>ಕ್ರಮ ಸಂಖ್ಯೆ</th><th>ಮಾನದಂಡ</th></tr>
<tr><td>1.</td><td>ಕಲಾ ಮತ್ತು ವಾಣಿಜ್ಯ ವಿಭಾಗಗಳಲ್ಲಿ ಒಟ್ಟಾಗಿ ಕನಿಷ್ಟ 40 ವಿದ್ಯಾರ್ಥಿಗಳು ಮತ್ತು ವಿಜ್ಞಾನ ವಿಭಾಗದಲ್ಲಿ ಕನಿಷ್ಟ 40 ವಿದ್ಯಾರ್ಥಿಗಳ ಹಾಜರಾತಿ ಇರತಕ್ಕದ್ದು. ಪ್ರತಿಯೊಂದು ಭಾಷಾ ವಿಷಯಕ್ಕಾಗಿ ಒಬ್ಬರು ಉಪನ್ಯಾಸಕರು ಮತ್ತು ಪ್ರತಿಯೊಂದು ಐಚ್ಛಿಕ ವಿಷಯಕ್ಕಾಗಿ ಒಬ್ಬರು ಉಪನ್ಯಾಸಕರು ಇರತಕ್ಕದ್ದು. ಪ್ರತಿಯೊಂದು ಭಾಷಾ ವಿಷಯಕ್ಕಾಗಿ ಕನಿಷ್ಟ 10 ವಿದ್ಯಾರ್ಥಿಗಳ ಹಾಜರಾತಿ ಮತ್ತು ಕಲಾ ಮತ್ತು ವಾಣಿಜ್ಯ ಐಚ್ಛಿಕ ವಿಷಯಗಳಲ್ಲಿ ಕನಿಷ್ಠ 15 ವಿದ್ಯಾರ್ಥಿಗಳ ಹಾಜರಾತಿ ಇರತಕ್ಕದ್ದು. ಇದಲ್ಲದೆ, ಹೆಚ್ಚುವರಿ ವಿಬಾಗಗಳಿಗಾಗಿ ಈ ಕೆಳಕಂಡಂತೆ ವಿದ್ಯಾರ್ಥಿಗಳ ಕನಿಷ್ಠ ಹಾಜರಾತಿ ಇರತಕ್ಕದ್ದು.<br><table><tr><th>ಹಾಜರಾತಿ</th><th>ವಿಭಾಗಗಳು</th></tr><tr><td>1 ರಿಂದ 100</td><td>ಒಂದು</td></tr><tr><td>101 ರಿಂದ 200</td><td>ಎರಡು</td></tr><tr><td>201 ರಿಂದ 300</td><td>ಮೂರು</td></tr></table></td></tr>
<tr><td>2.</td><td><u>ವಿದ್ಯಾರ್ಥಿಗಳ ಹಾಜರಾತಿ:–</u> ದಾಖಲಾದ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 90 ರಷ್ಟು ವಿದ್ಯಾರ್ಥಿಗಳು ಕಳೆದ ವರ್ಷದ ಪಿ.ಯ.ಸಿ. ಪರೀಕ್ಷೆಯಲ್ಲಿ ಹಾಜರಾಗಿರತಕ್ಕದ್ದು.</td></tr>
<tr><td>3.</td><td><u>ಪರೀಕ್ಷಾ ಫಲಿತಾಂಶ:–</u>ಹಿಂದಿನ ಶೈಕ್ಷಣಿಕ ವರ್ಷದ ದ್ವಿತೀಯ ಪಿ.ಯು.ಸಿ. ಪರೀಕ್ಷೆಗೆ ಹಾಜರಾಗಿದ್ದ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 40 ರಷ್ಟು ಉತ್ತೀರ್ಣರಾಗಿರಬೇಕು. ಹಿಂದಿನ ವರ್ಷದಲ್ಲಿ ಶೇಕಡ 40 ಕ್ಕಿಂತ ಕಡಿಮೆ ಫಲಿತಾಂಶವಿದ್ದ ಪ್ರಕರಣಗಳಲ್ಲಿ, ಸಂಬಂಧಿಸಿದ ಸಂಸ್ಥೆ, ಮುಂದಿನ ಶೈಕ್ಷಣಿಕ ವರ್ಷಗಳಲ್ಲಿ ಫಲಿತಾಂಶವನ್ನು ಉತ್ತಮಪಡಿಸಿ, ಶೇಕಡ 40 ಕ್ಕಿಂತ ಕಡಿಮೆ ಇಲ್ಲದ ಫಲಿತಾಂಶ ಗಳಿಸಿದ ನಂತರ, ಅನುದಾನಿತ ಹುದ್ದೆಗಳ ಎದುರು ಉಂಟಾದ ರಿಕ್ತ ಸ್ಥಾನಗಳನ್ನು ತುಂಬಲು ಅನುಮತಿಯನ್ನು ಕೋರಬಹುದು.</td></tr>
<tr><td>4.</td><td><u>ವಿದ್ಯಾರ್ಥಿಗಳ ದಾಖಲಾತಿಯಲ್ಲಿ ಮೀಸಲಾತಿ:–</u> ಸರ್ಕಾರ ಕಾಲಕಾಲಕ್ಕೆ ಹೊರಡಿಸಿದ ಆದೇಶಗಳ ಪ್ರಕಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳಿಗಾಗಿ ಹಾಗೂ ಹೆಣ್ಣು ಮಕ್ಕಳಿಗಾಗಿ ದಾಖಲಾತಿಯಲ್ಲಿ ಸೀಟುಗಳನ್ನು ಮೀಸಲಿಡತಕ್ಕದ್ದು. ಅಲ್ಪಸಂಖ್ಯಾತರ ಸಂಸ್ಥೆಯೆಂದು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಕನಿಷ್ಠ ಶೇಕಡ 50 ರಷ್ಟು ವಿದ್ಯಾರ್ಥಿಗಳು ಸಂಬಂಧಿಸಿದ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿರತಕ್ಕದ್ದು. (ಸಂದರ್ಭಾನುಸಾರ ಭಾಷಾ ಅಥವಾ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿರತಕ್ಕದ್ದು.)<br>ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳ ದಾಖಲಾತಿಯಲ್ಲಿ ಕೊರತೆಯಾಗಿದ್ದಲ್ಲಿ, ನಿಗದಿತ ಕನಿಷ್ಠ ಮಟ್ಟಕ್ಕೆ ಅವರ ದಾಖಲಾತಿಯನ್ನು ಮುಂದಿನ ವರ್ಷದಲ್ಲಿ ಮಾಡಲು ಸಂಬಂಧಿಸಿದ ಸಂಸ್ಥೆ ವಿಶೇಷ ಪ್ರಯತ್ನವನ್ನು ನಡೆಸಿ, ಅದನ್ನು ಗಳಿಸಿದ ನಂತರ ಅನುದಾನಿತ ಹುದ್ದೆಗಳ ಎದುರು ಉಂಟಾದ ರಿಕ್ತ ಸ್ಥಾನಗಳನ್ನು ತುಂಬಲು ಅನುಮತಿಯನ್ನು ಕೋರಬಹುದು.</td></tr>
<tr><td>5.</td><td><u>ನೇರ ನೇಮಕಾತಿಯಲ್ಲಿ ಮೀಸಲಾತಿ:–</u> ಸರ್ಕಾರ ಕಾಲಕಾಲಕ್ಕೆ ಹೊರಡಿಸಿದ ಆದೇಶಗಳ ಪ್ರಕಾರ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳಿಗಾಗಿ ನೇರ ನೇಮಕಾತಿಯಲ್ಲಿ ಮೀಸಲಾತಿ ನಿಯಮಗಳನ್ನು ಪಾಲಿಸತಕ್ಕದ್ದು. ಮತೀಯ ಅಲ್ಪಸಂಖ್ಯಾತ ಆಡಳಿತ ಮಂಡಳಿಗಳ ವತಿಯಿಂದ ನಡೆಯುತ್ತಿರುವ ಪದವಿ ಪೂರ್ವ ಕಾಲೇಜುಗಳಿಗೆ ಇದು ಅನ್ವಯವಾಗುವುದಿಲ್ಲ.</td></tr>
<tr><td>6.</td><td>ಆಡಳಿತ ಮಂಡಳಿಯ ಮಾಲೀಕತ್ವದ ಬಗ್ಗೆ ಯಾವುದೇ ವ್ಯಾಜ್ಯ ಇರತಕ್ಕದ್ದಲ್ಲ.</td></tr>
</table>

## ಪಟ್ಟಿ–2

ಅನುದಾನಿತ ಖಾಸಗಿ ಪದವಿ ಪೂರ್ವ ಕಾಲೇಜುಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಮೂಲಭೂತ ಸೌಲಭ್ಯಗಳು ಹಾಗೂ ಸಂಬಂಧಿಸಿದ ಖಾಸಗಿ ಶಿಕ್ಷಣ ಸಂಸ್ಥೆ ಒದಗಿಸಿರುವ ಮೂಲಭೂತ ಸೌಲಭ್ಯಗಳ ಮೌಲ್ಯಮಾಪನ (Evaluation of the infrastructure provided)

<table>
<tr><th>ಕ್ರಮ ಸಂಖ್ಯೆ</th><th>ಮಾನದಂಡ</th><th>ಗರಿಷ್ಠ ಅಂಕಗಳು</th></tr>
<tr><td>1.</td><td>ಆರ್.ಸಿ.ಸಿ./ಪಕ್ಕಾ ಕಟ್ಟಡ ಇರತಕ್ಕದ್ದು. ಅದರಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಗೆ ಕನಿಷ್ಠ 8 ಚದರ ಅಡಿ ಜಾಗ ಹಾಗೂ ಪ್ರತಿಯೊಂದು ತರಗತಿ ಕೊಠಡಿಯ ಅಳತೆ ಕನಿಷ್ಠ 660 ಚದರ ಅಡಿ ಇರತಕ್ಕದ್ದು. 660 ಚದರ ಅಡಿಗಿಂತ ಕಡಿಮೆ ಅಳತೆ ಇದ್ದಲ್ಲಿ, ಯಾವುದೇ ಅಂಕಗಳನ್ನು ನೀಡತಕ್ಕದ್ದಲ್ಲ.<br>ಪ್ರತಿಯೊಂದು ವಿಭಾಗಕ್ಕಾಗಿ ಒಂದು ಕೊಠಡಿ ಇರತಕ್ಕದ್ದು.<br>ಕಟ್ಟಡದ ಬುನಾದಿ ಗಟ್ಟಿಯಾಗಿರತಕ್ಕದ್ದು ಹಾಗೂ ಪಕ್ಕಾ ಗೋಡೆಗಳು ಹೊಂದಿರತಕ್ಕದ್ದು. ಛಾವಣಿಯು ಆರ್.ಸಿ.ಸಿ. ಅಥವಾ ಸಿಮೆಂಟ್ ಅಥವಾ ಹೆಂಚು, ಇದರಿಂದ ಕಟ್ಟಿರತಕ್ಕದ್ದು.<br>ಪ್ರತಿಯೊಂದು ಕೊಠಡಿಯಲ್ಲಿ ಸಾಕಷ್ಟು ಬೆಳಕು, ಗಾಳಿ ಮತ್ತು ಅಗ್ನಿನಿರೋಧಕ ಯಂತ್ರಗಳು ಇರತಕ್ಕದ್ದು . . . .. . .<br>ಕಟ್ಟಡದ ಹಾಗೂ ಸಂಪೂರ್ಣ ನಿವೇಶನದ ಭಾವಚಿತ್ರವನ್ನು ಹಾಗೂ ಕಟ್ಟಡದ ಪ್ಲಾನ್ ಮತ್ತು ನಿವೇಶನದ ಪ್ಲಾನ್‌ಗಳ ಪ್ರತಿಯನ್ನು ಲಗತ್ತಿಸತಕ್ಕದ್ದು.</td><td>40 ಅಂಕಗಳು</td></tr>
<tr><td>2.</td><td>ಕಟ್ಟಡದಲ್ಲಿ ಈ ಕೆಳಕಂಡ ಕೊಠಡಿಗಳು ಒಳಗೊಂಡಿರತಕ್ಕದ್ದು–<br>ಪಿ.ಯು.ಸಿ.ಯನ್ನು ಪ್ರಾರಂಭಿಸದೆ ಮೊದಲನೆಯ ಸಾಲಿನಲ್ಲಿ ಎರಡು ವಿಭಾಗಗಳೊಂದಿಗೆ 40 ರಿಂದ 80 ವಿದ್ಯಾರ್ಥಿಗಳ ಸಂಖ್ಯಾಬಲ ಇದ್ದಲ್ಲಿ ಈ ಕೆಳಕಂಡ ಕೊಠಡಿಗಳನ್ನು ಒದಗಿಸಿರತಕ್ಕದ್ದು.
<table>
<tr><th>ಕೊಠಡಿಗಳು</th><th>ಅಳತೆ</th><th>ಸಂಖ್ಯೆ</th></tr>
<tr><td>1) ಉಪನ್ಯಾಸಕ ಕೊಠಡಿ</td><td>22x30</td><td>2</td></tr>
<tr><td>2) ಚಿಕ್ಕ ಕೊಠಡಿಗಳು (Smaller halls)</td><td>22x15</td><td>2</td></tr>
<tr><td>3) ಗ್ರಂಥಾಲಯ</td><td>22x30</td><td>1</td></tr>
<tr><td>4) ಸಿಬ್ಬಂದಿ ಕೊಠಡಿ</td><td>22x30</td><td>1</td></tr>
<tr><td>5) ಕಛೇರಿ ಮತ್ತು ಪ್ರಾಂಶುಪಾಲರ ಕೊಠಡಿ</td><td>22x30</td><td>1</td></tr>
<tr><td>6) ಮಹಿಳೆಯರ ಕೊಠಡಿ</td><td>22x15</td><td>1</td></tr>
<tr><td>7) ಓದುವ ಕೊಠಡಿ</td><td>22x30</td><td>1</td></tr>
<tr><td colspan="3"><u>ವಿಜ್ಞಾನ (ಕಟ್ಟಡದ) ವಿಭಾಗ</u></td></tr>
<tr><td>8) ಪ್ರಾಯೋಗಿಕ ಕೊಠಡಿ (Practical hall) (ರಾಸಾಯನ)</td><td>25x45</td><td>1</td></tr>
<tr><td>10) ಪ್ರಾಯೋಗಿಕ ಕೊಠಡಿಗಳು (Practical halls)</td><td>25x45</td><td>2</td></tr>
<tr><td>10) ವಿಜ್ಞಾನ ಉಗ್ರಾಣ (Science stores)</td><td>25x10</td><td>2</td></tr>
<tr><td colspan="3"><u>ಪಿ.ಯು.ಸಿ.ಯನ್ನು ಪ್ರಾರಂಭಿಸಿದ ಎರಡನೇ ವರ್ಷದಲ್ಲಿ ಈ ಕೆಳಕಂಡದ್ದನ್ನು ಹೆಚ್ಚುವರಿಯಾಗಿ ಒದಗಿಸತಕ್ಕದ್ದು</u></td></tr>
<tr><td>1) ಉಪನ್ಯಾಸಕ ಕೊಠಡಿ</td><td>22x30</td><td>2</td></tr>
<tr><td>2) ಚಿಕ್ಕ ಕೊಠಡಿಗಳು (Smaller halls)</td><td>22x15</td><td>2</td></tr>
</table></td><td>18 ಅಂಕಗಳು (ಪ್ರತಿಯೊಂದು ಕೊಠಡಿಗಾಗಿ 1 ಅಂಕ. ಈ ರೀತಿ ಒಟ್ಟು 18 ಕೊಠಡಿಗಳಿಗಾಗಿ 18 ಅಂಕಗಳು) ಪ್ರತಿಯೊಂದು ಕೊಠಡಿಯ ಭಾವಚಿತ್ರವನ್ನು ಲಗತ್ತಿಸತಕ್ಕದ್ದು.</td></tr>
<tr><td>3.</td><td><u>ಗ್ರಂಥಾಲಯ/ಓದುವ ಸ್ಥಳಾವಕಾಳ:–</u><br>(ಅ) ವಿವಿಧ ವಿಷಯಗಳಿಗೆ ಸಂಬಂಧಿಸಿದ ಕನಿಷ್ಠ 5000 ಪುಸ್ತಕಗಳನ್ನು ಒಳಗೊಂಡ ಶಿಕ್ಷಕರ ಗ್ರಂಥಾಲಯ.<br>(ಆ) ವಿವಿಧ ವಿಷಯಗಳಿಗೆ ಸಂಬಂಧಿಸಿದ ಕನಿಷ್ಠ 5000 ಪುಸ್ತಕಗಳನ್ನು ಒಳಗೊಂಡ ವಿದ್ಯಾರ್ಥಿಗಳ ಗ್ರಂಥಾಲಯ ಅದರಲ್ಲಿ ಮ್ಯಾಪ್, ಸಿ.ಡಿ, ಮತ್ತು ಚಾರ್ಟ್‌ಗಳು ಒಳಗೊಂಡಿರಬಹುದು.<br>ಗ್ರಂಥಾಲಯ ಕೊಠಡಿಯ ಹಾಗೂ ಪುಸ್ತಕಗಳ ಭಾವಚಿತ್ರವನ್ನು ಲಗತ್ತಿಸತಕ್ಕದ್ದು.</td><td>(ಗರಿಷ್ಠ 3 ಅಂಕಗಳು)<br><br>ಸದರಿ 3 ಅಂಕಗಳ ಪೈಕಿ 1.5 ಅಂಕಗಳು<br>ಸದರಿ 3 ಅಂಕಗಳ ಪೈಕಿ 1.5 ಅಂಕಗಳು</td></tr>
</table>

| | | |
|---|---|---|
| 3. | **ಕ್ರೀಡಾ ಕೊಠಡಿ** | 3 ಅಂಕಗಳು |
| 4. | **ಪ್ರಯೋಗ ಶಾಲಾ ಉಪಕರಣಗಳು ಮತ್ತು ರಾಸಾಯನಗಳು:**<br>ಇಲಾಖೆ ನಿಗದಿಪಡಿಸಿದ ಮಾದರಿ ಪಟ್ಟಿಯ ಪ್ರಕಾರ ಕನಿಷ್ಠ 30 ಸಾವಿರ ರೂಪಾಯಿಗಳ ಮೌಲ್ಯದ ಉಪಕರಣಗಳು ಇದ್ದು, ಅದರ ಪೈಕಿ ಕನಿಷ್ಠ ರೂ.10,000/–ಗಳಷ್ಟು ಮೌಲ್ಯದ ಉಪಕರಣಗಳು ರಾಸಾಯನ ಶಾಸ್ತ್ರಕ್ಕಾಗಿ ಮತ್ತು ರೂ.10,000/– ಗಳಷ್ಟು ಮೌಲ್ಯದ ಉಪಕರಣಗಳು ಭೌತಶಾಸ್ತ್ರಕ್ಕಾಗಿ ಹಾಗೂ ಉಳಿದ ವಿಷಯಗಳಿಗಾಗಿ ರೂ.10,000/–ಗಳಷ್ಟು ಮೌಲ್ಯದ ಉಪಕರಣಗಳು.<br>ಪ್ರಯೋಗ ಶಾಲೆಯ ಭಾವಚಿತ್ರವನ್ನು ಲಗತ್ತಿಸತಕ್ಕದ್ದು. | 3 ಅಂಕಗಳು |
| 5. | **ಹೆಣ್ಣುಮಕ್ಕಳಿಗಾಗಿ ಶೌಚಾಲಯ**<br>ಹೆಣ್ಣುಮಕ್ಕಳಿಗಾಗಿ ಪಕ್ಕಾ ಶೌಚಾಲಯ ಇರತಕ್ಕದ್ದು. ಅದರಲ್ಲಿ 4 ಭಾಗಗಳಲ್ಲಿ ಯೂರಿನಲ್ಸ್ ಹಾಗೂ ಒಂದು ಶೌಚಾಲಯ ಇರತಕ್ಕದ್ದು.<br>ಹೆಣ್ಣುಮಕ್ಕಳ ಶೌಚಾಲಯದ ಭಾವಚಿತ್ರವನ್ನು ಲಗತ್ತಿಸತಕ್ಕದ್ದು. | 8 ಅಂಕಗಳು |
| 6. | **ಗಂಡು ಮಕ್ಕಳಿಗಾಗಿ ಶೌಚಾಲಯ**<br>ಗಂಡುಮಕ್ಕಳಿಗಾಗಿ ಪಕ್ಕಾ ಶೌಚಾಲಯ ಇರತಕ್ಕದ್ದು. ಅದರಲ್ಲಿ 4 ಭಾಗಗಳಲ್ಲಿ ಯೂರಿನಲ್ಸ್ ಹಾಗೂ ಒಂದು ಶೌಚಾಲಯ ಇರತಕ್ಕದ್ದು.<br>ಗಂಡುಮಕ್ಕಳ ಶೌಚಾಲಯದ ಭಾವಚಿತ್ರವನ್ನು ಲಗತ್ತಿಸತಕ್ಕದ್ದು. | 5 ಅಂಕಗಳು |
| 7. | **ನೀರಿನ ಟ್ಯಾಂಕ್ (ಸ್ಥಿರವಾದ ಸಿಮೆಂಟ್ ಟ್ಯಾಂಕ್ ಅಥವಾ ಸಿಂಥಟಿಕ್ ಫೈಬರ್ ಟ್ಯಾಂಕ್ ಇತ್ಯಾದಿ)**<br>50 ರಿಂದ 100 ಹಾಜರಾತಿ ಇರುವ ಶಾಲೆಗಳಲ್ಲಿ ಕನಿಷ್ಠ 500 ಲೀಟರ್‌ಗಳ ಸಾಮರ್ಥ್ಯದ ಟ್ಯಾಂಕ್ ಇರತಕ್ಕದ್ದು. 100 ಕ್ಕಿಂತ ಹೆಚ್ಚು ಹಾಜರಾತಿ ಇರುವ ಶಾಲೆಗಳಲ್ಲಿ ಕನಿಷ್ಠ 1000 ಲೀಟರ್‌ಗಳ ಸಾಮರ್ಥ್ಯದ ಟ್ಯಾಂಕ್ ಇರತಕ್ಕದ್ದು.<br>ನೀರಿನ ಟ್ಯಾಂಕ್‌ನ ಭಾವಚಿತ್ರವನ್ನು ಲಗತ್ತಿಸತಕ್ಕದ್ದು. | 5 ಅಂಕಗಳು |
| 8. | ಪೀಠೋಪಕರಣ:–<br>(ಅ) ಹಾಜರಾದ ಎಲ್ಲಾ ಮಕ್ಕಳಿಗಾಗಿ ಕುಳಿತುಕೊಳ್ಳಲು ಇದ್ದಲ್ಲಿ. (ಹಾಜರಾದ ಎಲ್ಲಾ ಮಕ್ಕಳಿಗಾಗಿ ಕುಳಿತುಕೊಳ್ಳಲು ಇಲ್ಲದೇ ಇದ್ದಲ್ಲಿ ಯಾವುದೇ ಅಂಕಗಳನ್ನು ನೀಡತಕ್ಕದ್ದಲ್ಲ)<br>(ಪ್ರತಿಯೊಂದು ಕೊಠಡಿಯಲ್ಲಿರುವ ಪೀಠೋಪಕರಣಗಳ ಭಾವಚಿತ್ರವನ್ನು ಲಗತ್ತಿಸತಕ್ಕದ್ದು.) | 5 ಅಂಕಗಳು |
| 9. | ಪಾಠೋಪಕರಣ, ಕಲಿಕಾ ಮತ್ತು ಆಟೋಪಕರಣ:–<br>(ಅ) ರೂ.10,000/– ಅಥವಾ ಅದಕ್ಕಿಂತ ಹೆಚ್ಚಿನ ಬೆಲೆಯ ಉಪಕರಣಗಳು ಇದ್ದಲ್ಲಿ<br>(ಆ) ರೂ.5,000/– ಅಥವಾ ಅದಕ್ಕಿಂತ ಹೆಚ್ಚಿನ ಬೆಲೆಯ ಉಪಕರಣಗಳು, ಆದರೆ ರೂ.10,000/–ಕ್ಕಿಂತ ಕಡಿಮೆ ಇದ್ದಲ್ಲಿ.<br>(ಇ) ರೂ.5,000/– ಕ್ಕಿಂತ ಕಡಿಮೆ ಬೆಲೆಯ ಉಪಕರಣಗಳು. | (ಗರಿಷ್ಠ 5 ಅಂಕಗಳು)<br>5 ಅಂಕಗಳು<br>ಸದರಿ 5 ಅಂಕಗಳ ಪೈಕಿ 2 ಅಂಕಗಳು.<br>ಯಾವುದೇ ಅಂಕಗಳು ಇಲ್ಲ. |
| 10. | ಆಟದ ಮೈದಾನ:–<br>(ಅ) ವಾಲಿಬಾಲ್ ಕೋರ್ಟಿನ ಎರಡು ಪಟ್ಟು ಅಥವಾ ಅದಕ್ಕಿಂತ ಹೆಚ್ಚಿನ ಅಳತೆಯ ಆಟದ ಮೈದಾನ ಇದ್ದಲ್ಲಿ.<br>(ಆ) ಒಂದು ವಾಲಿಬಾಲ್ ಕೋರ್ಟಿನ ಅಳತೆಯಷ್ಟು ಆಟದ ಮೈದಾನ ಇದ್ದಲ್ಲಿ.<br>(ಇ) (ಆ) ಗಿಂತ ಕಡಿಮೆ ಅಳತೆಯ ಆಟದ ಮೈದಾನ ಇದ್ದಲ್ಲಿ.<br>ಆಟದ ಮೈದಾನದ ಭಾವಚಿತ್ರಗಳನ್ನು ಲಗತ್ತಿಸತಕ್ಕದ್ದು | (ಗರಿಷ್ಠ 5 ಅಂಕಗಳು)<br>5 ಅಂಕಗಳು<br>ಸದರಿ 5 ಅಂಕಗಳ ಪೈಕಿ 2 ಅಂಕಗಳು<br>ಯಾವುದೇ ಅಂಕಗಳು ಇಲ್ಲ. |
| | ಒಟ್ಟು (ಗರಿಷ್ಠ) | 100 ಅಂಕಗಳು |

2. ಸರ್ಕಾರದ ಆದೇಶ ಸಂಖ್ಯೆ:ಇಡಿ 77 ಎಸ್‌ಇಪಿ 2007 (ಭಾಗ) ದಿನಾಂಕ:31–03–2008 ಮತ್ತು ಸರ್ಕಾರದ ಆದೇಶ ಸಂಖ್ಯೆ:ಇಡಿ 16 ಟಿಪಿಯು 2011 ದಿನಾಂಕ:30–09–2011 ಪ್ರಕಾರ ಖಾಲಿ ಹುದ್ದೆಗಳನ್ನು ತುಂಬಲು ಹಾಗೂ ಅದಕ್ಕೆ ಅನುದಾನಸಹಿತ ಅನುಮೋದನೆ ಪಡೆಯಲು ಅರ್ಹವಾಗಲು, ಸಂಬಂಧಿಸಿದ ಅನುದಾನಿತ ಖಾಸಗಿ ಪದವಿ ಪೂರ್ವ ಕಾಲೇಜು, ಸದರಿ 100 ಅಂಕಗಳ ಪೈಕಿ ಸರಾಸರಿ ಕನಿಷ್ಠ 60 ಅಂಕಗಳನ್ನು ಪಡೆಯತಕ್ಕದ್ದು.

(ಎಸ್.ಹೆಚ್.ಕುರಿಯವರ್),
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪದವಿ ಪೂರ್ವ)

## ಅನುಬಂಧ-2

ಸರ್ಕಾರದ ಆದೇಶ ಸಂಖ್ಯೆ: ಇಡಿ 77 ಎಸ್‌ಇಪಿ 2007 (ಭಾಗ) ದಿನಾಂಕ:31-03-2008 ಮತ್ತು ಸರ್ಕಾರದ ಆದೇಶ ಸಂಖ್ಯೆ:ಇಡಿ 16 ಟಿಪಿಯು 2011 ದಿನಾಂಕ:30-09-2011ರನ್ವಯ ನಿವೃತ್ತಿ, ನಿಧನ, ರಾಜೀನಾಮೆ, ಬಡ್ತಿ, ಮರಣ, ಇತ್ಯಾದಿ ಕಾರಣಗಳಿಂದ ಉದ್ಭವಿಸಿದ ಖಾಲಿ ಹುದ್ದೆಗಳನ್ನು ತುಂಬಲು ಪ್ರಸ್ತಾವನೆ ಕಳುಹಿಸಲು ನಿಗದಿಪಡಿಸಿದ ಚೆಕ್‌ಲಿಸ್ಟ್.

| ಕ್ರಮ ಸಂಖ್ಯೆ | ಮಾನದಂಡ | ಗರಿಷ್ಠ ಅಂಕಗಳು |
|---|---|---|
| 1. | ಸಂಬಂಧಿಸಿದ ಅನುದಾನಿತ ಖಾಸಗಿ ಪದವಿ ಪೂರ್ವ ಕಾಲೇಜು ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾಗಿರತಕ್ಕದ್ದು ಹಾಗೂ ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೇ ಸತತವಾಗಿ ನಡೆಸಿರಬೇಕು. | |
| 2. | ಸಂಬಂಧಿಸಿದ ಶಿಕ್ಷಣ ಸಂಸ್ಥೆ, ಕರ್ನಾಟಕ ಶಿಕ್ಷಣ ಅಧಿನಿಯಮ, 1983 ರ ಅಡಿಯಲ್ಲಿ ರಚಿಸಲಾಗಿರುವ ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತರೆ) ನಿಯಮಗಳು, 2006 ರ ಪ್ರಕಾರ ನೋಂದಣಿಯಾಗಿ ಮಾನ್ಯತೆಯನ್ನು ಪಡೆದು, ಪ್ರಸಕ್ತ ಸಾಲಿಗೆ ನವೀಕರಣವಾಗಿರತಕ್ಕದ್ದು. | |
| 3. | ಸಂಬಂಧಿಸಿದ ಶಿಕ್ಷಣ ಸಂಸ್ಥೆ, ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತರೆ) ನಿಯಮಗಳು, 2006 ಮತ್ತು ಇತರೆ ಸಂಬಂಧಿತ ನಿಯಮಗಳ ಅಡಿಯಲ್ಲಿ ನಿಗದಿಪಡಿಸಿರುವಂತೆ ಕನಿಷ್ಠ ಮೂಲಭೂತ ಸೌಲಭ್ಯಗಳಾದ ಕಟ್ಟಡ, ಪೀಠೋಪಕರಣ, ಪಾಠೋಪಕರಣ, ಗ್ರಂಥಾಲಯ, ಪ್ರಯೋಗಶಾಲೆ ಮತ್ತು ಆಟದ ಮೈದಾನ, ಕುಡಿಯುವ ನೀರು, ಶೌಚಾಲಯ, ವಿದ್ಯುತ್ ಸೌಲಭ್ಯ ಮುಂತಾದ ಸೌಲಭ್ಯಗಳನ್ನು ಕಡ್ಡಾಯವಾಗಿ ಹೊಂದಿರಬೇಕು. ಅಲ್ಲದೇ, ಶಾಲೆಯ ಸುತ್ತಮುತ್ತಲಿನ ಪ್ರದೇಶವು ಆರೋಗ್ಯಕರವಾದ ಹಾಗೂ ನಿರ್ಮಲವಾದ ವಾತಾವರಣವನ್ನು ಹೊಂದಿರತಕ್ಕದ್ದು ಮತ್ತು ಮಕ್ಕಳಿಗೆ ಹಾನಿಕಾರಕವಾದ ಯಾವುದೇ ರೀತಿಯ ಅನಾರೋಗ್ಯಕರವಾದ ವಾತಾವರಣವನ್ನು ಹೊಂದಿರಬಾರದು. ಮಕ್ಕಳ ಶೈಕ್ಷಣಿಕ ಚಟುವಟಿಕೆ ಉತ್ತಮ ಮಟ್ಟದಲ್ಲಿರಲು ಅಗತ್ಯವಾದ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಹೊಂದಿರತಕ್ಕದ್ದು. | |
| 4. | ಕ್ರಮ ಸಂಖ್ಯೆ: (3) ರ ಉದ್ದೇಶಕ್ಕಾಗಿ, ಅನುಬಂಧ-1 ರಲ್ಲಿ ನಿಗದಿಪಡಿಸಿದಂತೆ, ಸಂಬಂಧಿಸಿದ ಪದವಿ ಪೂರ್ವ ಕಾಲೇಜನ್ನು ಮೌಲ್ಯಮಾಪನಕ್ಕೆ ಒಳಪಡಿಸಿ, ಆ ಮೌಲ್ಯಮಾಪನದ ಪ್ರಕಾರ ಸರಾಸರಿ 60 ಕ್ಕಿಂತ ಕಡಿಮೆ ಇಲ್ಲದಂತೆ ಅಂಕಗಳನ್ನು ಗಳಿಸದಿದ್ದಲ್ಲಿ, ಪದವಿ ಪೂರ್ವ ಕಾಲೇಜು ಪ್ರಸ್ತುತ ಆದೇಶದಡಿ, ನೇಮಕಾತಿಗಳ ಅನುದಾನಸಹಿತ ಅನುಮೋದನೆಗೆ ಅರ್ಹವಾಗುವುದಿಲ್ಲ. | |
| 5. | ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತರೆ) ನಿಯಮಗಳು, 2006 ರ ಅಡಿಯಲ್ಲಿ ನಿಗದಿಪಡಿಸಿರುವಂತೆ ಮಾದರಿ ಸಿಬ್ಬಂದಿ ರಚನೆಯನ್ವಯ ನೇಮಕಾತಿ ಮಾಡಿಕೊಂಡಿರಬೇಕು. | |
| 6. | ಪ್ರತಿಯೊಂದು ತರಗತಿಯಲ್ಲಿ ನಿಗದಿತ ಕನಿಷ್ಠ ಮಟ್ಟದ ವಿದ್ಯಾರ್ಥಿಗಳ ಹಾಜರಾತಿ ಸಂಖ್ಯಾಬಲವನ್ನು ಅನುಬಂಧ-1 ರ ಕ್ರಮ ಸಂಖ್ಯೆ:(1) ರಲ್ಲಿ ಉಲ್ಲೇಖಿಸಿದಂತೆ ಹೊಂದಿರತಕ್ಕದ್ದು. | |
| 7. | ನೇಮಕಾತಿ ಮಾಡಿಕೊಂಡಿರುವ ರಿಕ್ತ ಸ್ಥಾನವು ಸಕ್ಷಮ ಪ್ರಾಧಿಕಾರದಿಂದ ಈ ಮೊದಲು ಸಹಾಯಾನುದಾನಕ್ಕೆ ಒಳಪಟ್ಟಿರತಕ್ಕದ್ದು. | |
| 8. | ನೇಮಕಾತಿ ಮಾಡಿಕೊಂಡಿರುವ ಹುದ್ದೆಯು ನಿಧನ, ನಿವೃತ್ತಿ, ರಾಜೀನಾಮೆ ಮತ್ತು ನಿಯಮಾನುಸಾರ ಸಕ್ಷಮ ಪ್ರಾಧಿಕಾರದಿಂದ ಅನುಮೋದಿಸಲಾದ ಬಡ್ತಿಯಿಂದ ಮತ್ತು ಇತರ ನಿಯಮಬದ್ಧ ಕಾರಣಗಳಿಂದ ಖಾಲಿ ಆಗಿರುವ ಅನುದಾನಿತ ಹುದ್ದೆಯಾಗಿರತಕ್ಕದ್ದು. | |
| 9. | ನೇಮಕಾತಿ ಮಾಡಿಕೊಂಡಿರುವ ಅಭ್ಯರ್ಥಿಯು ನಿಯಮಗಳ ಪ್ರಕಾರ ಸಂಬಂಧಿಸಿದ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ವಯೋಮಿತಿ ಮತ್ತು ಇತರೆ ಅರ್ಹತೆಗಳನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು. | |
| 10. | ಈಗಾಗಲೇ ಈ ಹುದ್ದೆಗೆ ನೇಮಕವಾಗಿರುವ ಅಥವಾ ಮುಂದೆ ನೇಮಕವಾಗುವ ಉಪನ್ಯಾಸಕರ ನೇಮಕಾತಿಯು ನಿಗದಿತ ಸಿಬ್ಬಂದಿ ಮಾದರಿ ಮತ್ತು ನಿಯಮಗಳನ್ವಯ ಆಗಿರಬೇಕು/ಆಗಿರತಕ್ಕದ್ದು. | |

| | | |
|---|---|---|
| 11. | ಕರ್ನಾಟಕ ಶಿಕ್ಷಣ ಅಧಿನಿಯಮದ ಅಡಿಯಲ್ಲಿ ರಚಿತವಾಗಿರುವ ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತರೆ) ನಿಯಮಗಳು, 2006 ಈ ನಿಯಮಗಳನ್ವಯ ಈ ಹುದ್ದೆಗೆ ಆಯ್ಕೆ ಮಾಡಿದ ಅಭ್ಯರ್ಥಿಯನ್ನು ನೇಮಕ ಮಾಡಿಕೊಳ್ಳುವ ಪೂರ್ವದಲ್ಲಿ ಆಯ್ಕೆಯ ಪ್ರಕ್ರಿಯೆಯನ್ನು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಗಮನಕ್ಕೆ ತಂದು ಅನುಮೋದನೆ ಪಡೆದಿರತಕ್ಕದ್ದು. | |
| 12. | ಆಡಳಿತ ಮಂಡಳಿಯ ಮಾಲೀಕತ್ವದ ಬಗ್ಗೆ ಯಾವುದೇ ರೀತಿಯ ವ್ಯಾಜ್ಯ ಇರತಕ್ಕದ್ದಲ್ಲ. ಒಂದು ವೇಳೆ ವ್ಯಾಜ್ಯ ಇದ್ದಲ್ಲಿ, ಅಂತಹ ಸಂಸ್ಥೆಗಳು ಈ ಆದೇಶದಡಿ, ನೇಮಕಾತಿಗಳ ಅನುದಾನ ಸಹಿತ ಅನುಮೋದನೆಗೆ ಅರ್ಹತೆ ಪಡೆಯುವುದಿಲ್ಲ. | |
| 13. | ಪದವಿ ಪೂರ್ವ ಕಾಲೇಜುಗಳಲ್ಲಿ ದ್ವಿತೀಯ ಪಿ.ಯು.ಸಿ. ಪರೀಕ್ಷೆಯ ಸಾಮಾನ್ಯ ಫಲಿತಾಂಶವು ಅನುಬಂಧ–1 ರ ಪಟ್ಟಿ–1 ರಲ್ಲಿನ ಕ್ರಮ ಸಂಖ್ಯೆ(3) ರಂತೆ ಇರತಕ್ಕದ್ದು. | |
| 14. | ಕರ್ನಾಟಕ ಸಂಘಗಳ ನೊಂದಣಿ ನಿಯಮಾವಳಿಯಲ್ಲಿ ನಮೂದಿಸಿರುವ ಅವಕಾಶಗಳ ಪ್ರಕಾರ ಪ್ರತಿ ವರ್ಷ ಆಡಿಟ್ ನಡೆಸಿ ವರದಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಿರಬೇಕು ಹಾಗೂ ಇಲಾಖೆಯ ಮಾಹಿತಿಗಾಗಿ ಪಿಟಿಆರ್ ಮತ್ತು ಸಂಘದ ಕಾರ್ಯಕಾರಿ ಸದಸ್ಯರ ಅಧಿಕೃತ ಪಟ್ಟಿಯನ್ನು (ಸಕ್ಷಮ ಪ್ರಾಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು) ಸಲ್ಲಿಸತಕ್ಕದ್ದು. | |
| 15. | ಸರ್ಕಾರದ ಆದೇಶ ಸಂಖ್ಯೆ:ಇಡಿ 19 ಟಿಪಿಯು 2004 ದಿನಾಂಕ:01–02–2006 ರಲ್ಲಿ ಹೆಚ್ಚುವರಿ ವಿಭಾಗ/ ವಿಷಯಗಳನ್ನು ಅನುದಾನಕ್ಕೆ ಒಳಪಡಿಸುವುದನ್ನು ರದ್ದುಪಡಿಸಿರುವ ಹೆಚ್ಚುವರಿ ವಿಭಾಗ/ವಿಷಯಗಳಿಂದ ಉದ್ಭವಿಸುವ ಖಾಲಿ ಹುದ್ದೆಗಳನ್ನು ಅನುದಾನಕ್ಕೆ ಒಳಪಡಿಸಲು ಅವಕಾಶವಿರುವುದಿಲ್ಲ. | |
| 16. | ಹೆಚ್ಚುವರಿ ಉಪನ್ಯಾಸಕರ ಹುದ್ದೆ ಎಂದು ಗುರುತಿಸಿ ಹೆಚ್ಚುವರಿ ಉಪನ್ಯಾಸಕರನ್ನು ಬೇರೆ ಪದವಿ ಪೂರ್ವ ಕಾಲೇಜುಗಳಿಗೆ ಸ್ಥಳಾಂತರಿಸಿದ ಕಾರಣದಿಂದ ಖಾಲಿಯಾದ ಹುದ್ದೆಗಳು ತಾನಾಗಿ ರದ್ದಾಗಿದ್ದು ಅವುಗಳನ್ನು ಈ ಆದೇಶದ ಅವಕಾಶದಡಿ ತುಂಬಲು ಅವಕಾಶವಿಲ್ಲ. | |
| 17. | ಉಪನ್ಯಾಸಕರನ್ನು ಸ್ಥಳಾಂತರಿಸಿ, ಪುನರ್ ಸ್ಥಾಪಿಸಿದ ಶಿಕ್ಷಣ ಸಂಸ್ಥೆಯಲ್ಲಿ ಅವರನ್ನು ಕೆಲಸಕ್ಕೆ ಸೇರಿಸಿಕೊಳ್ಳದಿದ್ದರೆ ಅಂತಹ ಖಾಲಿ ಹುದ್ದೆಗಳನ್ನು ಶಾಶ್ವತ ಅನುದಾನರಹಿತ ಎಂದು ಆದೇಶಿಸಿದ್ದು, ಅವುಗಳನ್ನು ತುಂಬಲು ಅವಕಾಶವಿಲ್ಲ. | |
| 18. | ಸ್ವಾಭಾವಿಕ ಬೆಳವಣಿಗೆ ಮತ್ತು ಹೆಚ್ಚುವರಿ ವಿಭಾಗ/ವಿಷಯದಂತಹ ಕಾರಣಗಳಿಂದ ಉದ್ಭವಿಸಿದ ಹುದ್ದೆಗಳನ್ನು ಈ ಆದೇಶದಡಿ ಅನುದಾನಕ್ಕೆ ಒಳಪಡಿಸಲು ಅವಕಾಶವಿರುವುದಿಲ್ಲ. | |
| 19. | ಆಡಳಿತ ಮಂಡಳಿಯ ಹೆಸರು ಮತ್ತು ವಿಳಾಸ | |
| 20. | ಆಡಳಿತ ಮಂಡಳಿ ಯಾವ ವರ್ಗದ ಆಡಳಿತ ಮಂಡಳಿಯಿಂದ ಪದವಿ ಪೂರ್ವ ಕಾಲೇಜು ನಡೆಸಲ್ಪಡುತ್ತಿದೆ. | |
| 21. | ಪದವಿ ಪೂರ್ವ ಕಾಲೇಜಿನ ಹೆಸರು | |
| 22. | ಮಾನ್ಯತೆ ಪಡೆದ ವಿವರ | |
| 23. | ಹುದ್ದೆಯ ಪದನಾಮ | |
| 24. | ಈ ಹುದ್ದೆಯನ್ನು ಈ ಮೊದಲು ಅನುದಾನಕ್ಕೆ ಒಳಪಡಿಸಿದ ಆದೇಶ ಸಂಖ್ಯೆ, ದಿನಾಂಕ (ಪ್ರತಿ ಲಗತ್ತಿಸುವುದು) | |
| 25. | ರಿಕ್ತ ಸ್ಥಾನ ಉದ್ಭವವಾದ ಕಾರಣ | |
| 26. | ರಿಕ್ತ ಸ್ಥಾನ ಉದ್ಭವವಾದ ದಿನಾಂಕ | |
| 27. | ಹುದ್ದೆ ತುಂಬಲು ಅನುಮತಿ ಪಡೆದ ಆದೇಶ ಸಂಖ್ಯೆ ಹಾಗೂ ದಿನಾಂಕ ಹಾಗೂ ಅನುಮತಿ ನೀಡಿದ ಪ್ರಾಧಿಕಾರ | |
| 28. | ರಿಕ್ತ ಸ್ಥಾನವನ್ನು ಯಾವ ವರ್ಗಕ್ಕಾಗಿ ಮೀಸಲಿಡಲಾಗಿತ್ತು | |
| 29. | ಆ ವರ್ಗದವರನ್ನೆ ಆಯ್ಕೆ ಮಾಡಲಾಗಿದೆಯೇ | |
| 30. | ಅನುದಾನಕ್ಕೆ ಒಳಪಡಿಸಲು ಪ್ರಸ್ತಾಪಿಸಲಾದ ಹುದ್ದೆ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತರೆ) ನಿಯಮಗಳು, 2006 ರನ್ವಯ ಮತ್ತು ಪ್ರಚಲಿತ ನಿಯಮದಡಿ ಮಾದರಿ ಸಿಬ್ಬಂದಿ ರಚನೆಗೆ ಅನುಗುಣವಾಗಿದೆಯೇ. | |
| 31. | ನೇಮಕಗೊಂಡವರ ಹೆಸರು | |

| | | |
|---|---|---|
| 32. | ಹುದ್ದೆಯನ್ನು ತುಂಬಲು ಅರ್ಜಿಗಳನ್ನು ಆಹ್ವಾನಿಸಿ, ಜಾಹಿರಾತು ನೀಡಿದ ದಿನಾಂಕ | |
| 33. | ಸಂದರ್ಶನ ನಡೆಸಿದ ದಿನಾಂಕ | |
| 34. | ಹುದ್ದೆಗೆ ನಿಗದಿಪಡಿಸಿದ ನಿಗದಿತ ವಿದ್ಯಾರ್ಹತೆ ಹಾಗೂ ನಿಗದಿತ ವಯೋಮಿತಿ. | |
| 35. | (ಅ) ನೇಮಕಗೊಂಡಿರುವ ಅಭ್ಯರ್ಥಿಯ ವಿದ್ಯಾರ್ಹತೆ ಹಾಗೂ ವಯಸ್ಸು.<br>(ಆ) ಇವು ಚಾಲ್ತಿಯಲ್ಲಿರುವ ನಿಯಮ/ಆದೇಶಗಳ ಪ್ರಕಾರ ಇದೆಯೇ ? | |
| 36. | ಆಯ್ಕೆ ನಿಯಮಾನುಸಾರ ಆಗಿದೆಯೇ | |
| 37. | ಆಯ್ಕೆ ಪಟ್ಟಿ ಪ್ರಕಟಿಸಿದ ದಿನಾಂಕ | |
| 38. | ನೇಮಕಾತಿ ಆದೇಶ ನೀಡಿದ ದಿನಾಂಕ ಹಾಗೂ ಕರ್ತವ್ಯಕ್ಕೆ ಹಾಜರಾದ ದಿನಾಂಕ. | |
| 39. | ಜಿಲ್ಲಾ ಪರಿಶೀಲನಾ ಸಮಿತಿಯ ಸ್ಪಷ್ಟ ಅಭಿಪ್ರಾಯ/ಶಿಫಾರಸ್ಸು, (ಪರಿಶೀಲಿಸಬಹುದು, ಪರಿಗಣಿಸಬಹುದು, ಆದೇಶಕ್ಕಾಗಿ, ಮುಂದಿನ ಕ್ರಮಕ್ಕಾಗಿ ಎಂದು ಬರೆಯದೇ ಸ್ಪಷ್ಟವಾಗಿ, ಶಿಫಾರಸ್ಸು ಮಾಡಿದೆ, ಶಿಫಾರಸ್ಸು ಮಾಡಿಲ್ಲ ಎಂದು ನಮೂದಿಸಬೇಕು) | |
| 40. | ನಿರ್ದೇಶಕರ ಸ್ಪಷ್ಠ ಅಭಿಪ್ರಾಯ/ಶಿಫಾರಸ್ಸು, (ಪರಿಶೀಲಿಸಬಹುದು, ಪರಿಗಣಿಸಬಹುದು, ಆದೇಶಕ್ಕಾಗಿ, ಮುಂದಿನ ಕ್ರಮಕ್ಕಾಗಿ ಎಂದು ಬರೆಯದೇ ಸ್ಪಷ್ಟವಾಗಿ, ಶಿಫಾರಸ್ಸು ಮಾಡಿದೆ, ಶಿಫಾರಸ್ಸು ಮಾಡಿಲ್ಲ ಎಂದು ನಮೂದಿಸಬೇಕು) | |

**(ಎಸ್.ಹೆಚ್.ಕುರಿಯವರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ. (ಪದವಿ ಪೂರ್ವ ಶಿಕ್ಷಣ)

ಪಿ.ಆರ್. ನಂ. 68

## ಶಿಕ್ಷಣ ಸಚಿವಾಲಯ

ಸಂಖ್ಯೆ:ಇಡಿ 16 ಟಿಪಿಯು 2011, ಬೆಂಗಳೂರು, ದಿನಾಂಕ : 03/11/2011.

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ:ಇಡಿ 16 ಟಿಪಿಯು 2011 ದಿನಾಂಕ:30–09–2011 ರಲ್ಲಿ ಆದೇಶ ಭಾಗದ ಕಂಡಿಕೆ:7 ರಲ್ಲಿ "ಖಾಸಗಿ ಅನುದಾನರಹಿತ" ಎಂಬುದನ್ನು "ಖಾಸಗಿ ಅನುದಾನಿತ" ಎಂದು ಮತ್ತು ಅನುಬಂಧ–2 ರಲ್ಲಿನ ಕ್ರಮ ಸಂಖ್ಯೆ ಅಂಕಣದಲ್ಲಿ "40" ಎಂದಿರುವುದನ್ನು "39" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಮತ್ತು

ಸದರಿ ಆದೇಶಕ್ಕೆ ಅನುಬಂಧಿಸಲಾದ ಅನುಬಂಧ–2 ರಲ್ಲಿನ

| ಕ್ರಮ ಸಂಖ್ಯೆ | ಮಾನದಂಡ | ಗರಿಷ್ಠ ಅಂಕಗಳು |
|---|---|---|

ಹಾಗೂ

| | | |
|---|---|---|
| 39. | ಜಿಲ್ಲಾ ಪರಿಶೀಲನಾ ಸಮಿತಿಯ ಸ್ಪಷ್ಠ ಅಭಿಪ್ರಾಯ/ಶಿಫಾರಸ್ಸು, (ಪರಿಶೀಲಿಸಬಹುದು, ಪರಿಗಣಿಸಬಹುದು, ಆದೇಶಕ್ಕಾಗಿ, ಮುಂದಿನ ಕ್ರಮಕ್ಕಾಗಿ ಎಂದು ಬರೆಯದೇ, ಸ್ಪಷ್ಟವಾಗಿ ಶಿಫಾರಸ್ಸು ಮಾಡಿದೆ, ಶಿಫಾರಸ್ಸು ಮಾಡಿಲ್ಲ ಎಂದು ನಮೂದಿಸಬೇಕು) | |

ಮೇಲಿನ ಪಂಕ್ತಿಗಳನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಎಸ್.ಹೆಚ್.ಕುರಿಯವರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಪದವಿ ಪೂರ್ವ)

ಪಿ.ಆರ್. ನಂ. 69

## ಶಿಕ್ಷಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಪ್ರಾರಂಭಿಸಿರುವ 74 ಆದರ್ಶ ವಿದ್ಯಾಲಯಗಳಿಗೆ ಶಿಕ್ಷಕರನ್ನು ನೇಮಕಾತಿ ಮಾಡುವ ಕುರಿತು.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ದಿನಾಂಕ : 04–09–2011.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 90 ಎಂಸಿಡಿ 2010 ದಿನಾಂಕ : 10–08–2010.
3. ರಾಜ್ಯ ಯೋಜನಾ ನಿರ್ದೇಶಕರು, ಆರ್‌ಎಮ್‌ಎಸ್‌ಎ ಇವರ ಪತ್ರ ಸಂಖ್ಯೆ : ಆರ್‌ಎಮ್‌ಎಸ್‌ಎ/ಏವಿಟೀಚರ್.ಸಿ.ಆರ್./47/201–11 ದಿನಾಂಕ : 07–09–2011.
4. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಪತ್ರ ಸಂಖ್ಯೆ : ಸಿ4(1) ಆವಿ/ಶಿ.ನೇ/01/11–12 ದಿನಾಂಕ: 08–09–2011.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ರಾಜ್ಯದ 22 ಜಿಲ್ಲೆಗಳ 74 ಶೈಕ್ಷಣಿಕವಾಗಿ ಹಿಂದುಳಿದ ತಾಲ್ಲೂಕುಗಳಿಗೆ ಮಾದರಿ ಶಾಲೆಗಳು ಮಂಜೂರಾಗಿರುತ್ತದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶಾಲೆಗಳನ್ನು ಆಂಗ್ಲ ಮಾಧ್ಯಮದಲ್ಲಿ ಪ್ರಾರಂಭಿಸಲು ಹಾಗೂ ಅವಶ್ಯಕ ಶಿಕ್ಷಕರ ನೇಮಕಾತಿ ಕೇಂದ್ರೀಯ ವಿದ್ಯಾಲಯ ಶಾಲೆಗಳ ಮಾದರಿಯಲ್ಲಿ ಮಾಡಿಕೊಳ್ಳಲು ಆದೇಶ ನೀಡಲಾಗಿದೆ.

3. ಮೇಲೆ (3) ಮತ್ತು (4)ರಲ್ಲಿ ಓದಲಾದ ಪತ್ರದಲ್ಲಿ, ರಾಜ್ಯ ಯೋಜನಾ ನಿರ್ದೇಶಕರು, ಆರ್‌ಎಂಎಸ್‌ಎ ಮತ್ತು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ರವರು ಮೇಲಿನ (1) ಮತ್ತು (2)ರ ಆದೇಶದನ್ವಯ ರಾಜ್ಯದಲ್ಲಿ "ಆದರ್ಶ ವಿದ್ಯಾಲಯ" ಹೆಸರಿನಲ್ಲಿ 2010–11ನೇ ಸಾಲಿನಿಂದ ಆಂಗ್ಲ ಮಾಧ್ಯಮದಲ್ಲಿ ತಾತ್ಕಾಲಿಕ ವ್ಯವಸ್ಥೆಯಲ್ಲಿ 6ನೇ ತರಗತಿಯೊಂದಿಗೆ ಆರಂಭಿಸಲಾಗಿದೆ. ಈ ಶಾಲೆಗಳಲ್ಲಿ 10ನೇ ತರಗತಿಗಳನ್ನು ಪ್ರಾರಂಭಿಸಲು ಕ್ರಮ ವಹಿಸಿದ್ದು, ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಈ ಶಾಲೆಗಳಲ್ಲಿ 12ನೇ ತರಗತಿಯವರೆಗೆ ತರಗತಿಗಳನ್ನು ಪ್ರಾರಂಭಿಸಬೇಕಾಗಿರುತ್ತದೆ. ಇದರ ಆಧಾರದ ಮೇಲೆ 6 ರಿಂದ 8ನೇ ತರಗತಿಯವರೆಗೆ ಆದರ್ಶ ವಿದ್ಯಾಲಯಗಳಿಗೆ ಈ ಕೆಳಗಿನಂತೆ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಅನುಮತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ವಿಷಯ | ಶಿಕ್ಷಕರ ಸಂಖ್ಯೆ |
|---|---|---|
| 1 | ಮುಖ್ಯ ಶಿಕ್ಷಕರು | 74 |
| 2 | ಪ್ರಥಮ ಭಾಷೆ – ಆಂಗ್ಲ | 74 |
| 3 | ದ್ವಿತೀಯ ಭಾಷೆ – ಕನ್ನಡ | 74 |
| 4 | ತೃತೀಯ ಭಾಷೆ – ಹಿಂದಿ | 74 |
| 5 | ಗಣಿತ ಪಿ.ಸಿ.ಎಂ. | 74 |
| 6 | ವಿಜ್ಞಾನ ಸಿ.ಬಿ.ಜೆಡ್. | 74 |
| 7 | ಸಮಾಜ ವಿಜ್ಞಾನ | 74 |
| 8 | ದೈಹಿಕ ಶಿಕ್ಷಣ | 74 |
| | **ಒಟ್ಟು** | **592** |

ರಾಜ್ಯ ಸರ್ಕರದಲ್ಲಿ ಇತರೆ ಶಿಕ್ಷಕರಾದ ಕ್ರಾಫ್ಟ್ ಸಂಗೀತ ಡ್ರಾಯಿಂಗ್ ಮುಂತಾದ ವಿಷಯಗಳಿಗೆ ನೇಮಕಾತಿ ಮಾಡಿಕೊಳ್ಳುವ ಬಗ್ಗೆ ನೀತಿ ರಚನೆಯಾಗದಿರುವುದರಿಂದ ಈ ಶಿಕ್ಷಕರನ್ನು ಅರೆಕಾಲಿಕ ಶಿಕ್ಷಕರರಾಗಿ ಸ್ಥಳೀಯವಾಗಿ ಗೌರವಧನದ ಆಧಾರದಲ್ಲಿ ಶಾಲೆಗಳ ಮುಖ್ಯ ಶಿಕ್ಷಕರು ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಬಹುದಾಗಿರುತ್ತದೆ. ಈ ಕುರಿತಂತೆ ಗೌರವಧನವನ್ನು ರೂ. 5000/–ಕ್ಕೆ ನಿಗದಿ ಪಡಿಸಲು ಸರ್ಕಾರದ ಆದೇಶ ಪಡೆದು ಮಾರ್ಗಸೂಚಿ ಹೊರಡಿಸಬಹುದಾಗಿರುತ್ತದೆ. ಅರೆಕಾಲಿಕ ಶಿಕ್ಷಕರ ವಿವರಗಳು ಈ ಕೆಳಗಿನಂತಿರುತ್ತದೆ.

| ಕ್ರ.ಸಂ. | ವಿಷಯ | ಶಿಕ್ಷಕರ ಸಂಖ್ಯೆ |
|---|---|---|
| 1 | ಕ್ರಾಫ್ಟ್ | 74 |
| 2 | ಸಂಗೀತ | 74 |
| 3 | ಡ್ರಾಯಿಂಗ್ | 74 |
| | **ಒಟ್ಟು** | **222** |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 90 ಎಂಸಿಡಿ 2010(ಭಾಗ), ಬೆಂಗಳೂರು, ದಿನಾಂಕ : 30–11–2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ಆದರ್ಶ ವಿದ್ಯಾಲಯ" ಹೆಸರಿನಲ್ಲಿ 2010–11ನೇ ಸಾಲಿನಿಂದ ಪ್ರಾರಂಭಿಸಿರುವ ಆಂಗ್ಲ ಮಾಧ್ಯಮಗಳ 6 ರಿಂದ 8ನೇ ತರಗತಿಯವರೆಗೆ ಬೋಧಿಸುವ 74 ಆದರ್ಶ ವಿದ್ಯಾಲಯಗಳಿಗೆ ವಿಷಯವಾರು ಶಿಕ್ಷಕರಂತೆ ಒಟ್ಟು–592 ಶಿಕ್ಷಕರನ್ನು ಹಾಗೂ ಕ್ರಾಫ್ಟ್, ಸಂಗೀತ, ಡ್ರಾಯಿಂಗ್ ವಿಷಯಗಳಿಗೆ ಅರೆಕಾಲಿಕ ತಲಾ 74 ಶಿಕ್ಷಕರಂತೆ ಒಟ್ಟು 222 ಶಿಕ್ಷಕರನ್ನು ಹಾಗೂ 148 ಗ್ರೂಪ್ 'ಡಿ' ಸಿಬ್ಬಂದಿ ಒಟ್ಟು 962 ಮಂದಿಯನ್ನು ನೇರ ನೇಮಕಾತಿ ಮುಖಾಂತರ ನೇಮಕಾತಿ ಮಾಡಿಕೊಳ್ಳಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರ ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : 704 ವೆಚ್ಚ 8/2011 ದಿನಾಂಕ : 18–10–2011ರ ಸಹಮತಿ ಅನ್ವಯ ಹೊರಡಿಸಲಾಗಿದೆ.

**ಷರತ್ತುಗಳು :**

1. ಪೂರ್ಣಕಾಲಿಕ ಶಿಕ್ಷಕರು, ಅರೆಕಾಲಿಕ ಶಿಕ್ಷಕರು, ಮತ್ತು ಗ್ರೂಪ್ ಡಿ ಸಿಬ್ಬಂದಿಯ ನೇಮಕಾತಿಯು ಆದೇಶ ನೀಡಿರುವ ಸಂಖ್ಯೆಯನ್ನು ಮೀರಿರಬಾರದು.
2. ಭಾಷಾ ಶಿಕ್ಷಕರು, ಮತ್ತು ದೈಹಿಕ ಶಿಕ್ಷಕರನ್ನು ಹೊರತುಪಡಿಸಿ ಉಳಿದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನ ಶಿಕ್ಷಕರು ಪದವಿಯಲ್ಲಿ ಆಂಗ್ಲ ಮಾಧ್ಯಮದಲ್ಲಿ ಅಭ್ಯಾಸ ಮಾಡಿದವರನ್ನು ನೇಮಕ ಮಾಡಿಕೊಳ್ಳಬೇಕು.
3. 6 ರಿಂದ 8ನೇ ತರಗತಿವರೆಗೆ ಶಿಕ್ಷಕರ ನೇಮಕಾತಿ ಮಾಡಿಕೊಳ್ಳುವಾಗ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಅನುಸರಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 70

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ವೇತನ ಶ್ರೇಣಿ ರಹಿತ ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಗೆ ನೇಮಕಾತಿ ಮಾಡಿರುವ ಶ್ರೀ ಎಂ.ಆರ್. ಹೆಗಡೆ, ನಿವೃತ್ತ ಚುನಾವಣಾ ಆಯುಕ್ತರು, ಇವರ ಸೇವಾ ಷರತ್ತುಗಳ ಬಗ್ಗೆ ಪರಿಷ್ಕೃತ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 25 ಪಿಆರ್‌ಬಿ 2011, ದಿನಾಂಕ : 06–09–2011.
2. ಹಿರಿಯ ಲೆಕ್ಕಾಧಿಕಾರಿ, ಪ್ರಧಾನ ಮಹಾಲೇಖಪಾಲರು ರವರ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ : ದಿನಾಂಕ : 07–10–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ಆರ್.ಹೆಗಡೆ, ನಿವೃತ್ತ ರಾಜ್ಯ ಚುನಾವಣಾ ಆಯುಕ್ತರು, ಇವರನ್ನು ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ವೇತನ ಶ್ರೇಣಿ ರಹಿತ ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿದ್ದು, ದಿನಾಂಕ : 07–09–2011ರಂದು ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿರುತ್ತಾರೆ. ಈ ಆದೇಶದ ಪ್ರಸ್ತಾವನೆಯಲ್ಲಿ ಸದರಿ ಅಧಿಕಾರಿಯು ನಿವೃತ್ತಿ ಸಮಯದಲ್ಲಿ ರೂ. 80,000/– ಮೂಲ ವೇತನ ಪಡೆಯುತ್ತಿದ್ದು, ರೂ. 22,625/– ನಿವೃತ್ತಿ ವೇತನವನ್ನು ರೂ. 2,90,000/– ನಿವೃತ್ತಿ ಉಪದಾನವನ್ನು ಪಡೆದಿರುತ್ತಾರೆ ಎಂದು ವಿವರಿಸಿದ್ದು, ಆದೇಶ ಭಾಗದಲ್ಲಿ ಮರು ನೇಮಕಾತಿ ಅವಧಿಯಲ್ಲಿ ಈ ಕೆಳಗೆ ಸೂಚಿಸಿದ ಷರತ್ತಿಗೊಳಪಟ್ಟು ನೇಮಕಾತಿ ಮಾಡಲಾಗಿರುತ್ತದೆ.

1. ಇವರು ಮರು ನೇಮಕಾತಿ ಅವಧಿಯಲ್ಲಿ ಮಾಸಿಕ ರೂ. 50,735/– ಮೂಲ ವೇತನವನ್ನು ಪಡೆಯಲು ಅರ್ಹರಿರುತ್ತಾರೆ.
2. ಇವರು ನಿವೃತ್ತಿ ವೇತನದ ಮೇಲೆ ದಿನ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ ಮತ್ತು ನಿವೃತ್ತ ನ್ಯಾಯಾಧೀಶರನ್ನು ನೇಮಕಾತಿ ಮಾಡಿದ ಸಮಯದಲ್ಲಿ ನೀಡುವ ಇತರ ಭತ್ಯೆಗಳಾದ Sumptuary allowance, T.A., D.A., Medical Allowance, LTC ಮುಂತಾದ ಸೌಲಭ್ಯಗಳನ್ನು ಉಚ್ಛ ನ್ಯಾಯಾಲಯದ ನ್ಯಾಯಾಧೀಶರಿಗೆ ಲಭ್ಯವಾಗುವ ದರದಲ್ಲಿ ಪಡೆಯಲು ಅರ್ಹರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾಗಿರುವ ಪತ್ರದಲ್ಲಿ, ಪ್ರಸ್ತಾವನೆಯಲ್ಲಿ ರೂ. 26,625/– ಮಾಸಿಕ ನಿವೃತ್ತಿ ವೇತನ ಪಡೆದಿರುವುದಾಗಿ ವಿವರಿಸಿ ರೂ. 50,735/– ಮೂಲ ವೇತನ ನಿಗದಿಪಡಿಸಿರುವ ಕುರಿತು ಈ ಕೆಳಗೆ ಸೂಚಿಸಿದಂತೆ ತಿಳಿಸಿ ಸ್ಪಷ್ಟೀಕರಣವನ್ನು ಕೋರಲಾಗಿರುತ್ತದೆ.

" The pay drawn by the officer at the time of retirement was Rs. 80,000/- pm. Further as per records of this office he was authorized combined pension of Rs. 26,625/-pm (pension of Rs. 19,950) pm for services rendered in State Judiciary and additional pension of Rs. 6,675/- pm for services as State Election Commisioner) and lump sum DCRG of Rs. 3,00,000/- on which PEG works out to Rs. 3,132/- pm. Thus, his admissible pay on re-employment would be Rs. 50,243/- pm (i.e. Rs. 80,000/-pm reduced by combined pension of Rs. 26,625/- pm and PEG of Rs. 3,132/- pm as against Rs. 50,735/- pm mentioned in the said order. Further as against pension of Rs. 26,625/-pm authorized by this office, the same is indicated as Rs. 22,626/- pm in the Preamble which also needs to be clarified".

ಹಿರಿಯ ಲೆಕ್ಕಾಧಿಕಾರಿಯವರು ಮೇಲೆ ಸೂಚಿಸಿರುವ ವೇತನದ ವಿವರದ ಹಿನ್ನೆಲೆಯನ್ನು ಪರಿಶೀಲಿಸಿದ್ದು, ದಿನಾಂಕ : 06–09–2011ರ ಆದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತು ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 25 ಪಿಆರ್‌ಬಿ ಬೆಂಗಳೂರು, ದಿನಾಂಕ : 27–12–2011**

ಶ್ರೀ ಎಂ.ಆರ್. ಹೆಗಡೆ, ನಿವೃತ್ತ ರಾಜ್ಯ ಚುನಾವಣಾ ಆಯುಕ್ತರು, ಇವರನ್ನು 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕಾತಿ ಮಾಡಲಾಗಿರುವ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 25 ಪಿಆರ್‌ಬಿ 2011, ದಿನಾಂಕ : 06–09–2011ನ್ನು ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಭಾಗಶಃ ಮಾರ್ಪಡಿಸಿ ಪ್ರಸ್ತಾವನೆಯಲ್ಲಿ ಸೂಚಿಸಿರುವ ಸದರಿ ಆದೇಶ ಭಾಗದ 2ನೇ ಕಂಡಿಕೆಯಡಿಯಲ್ಲಿನ ಷರತ್ತುಗಳನ್ನು ಈ ಕೆಳಗೆ ಸೂಚಿಸಿದಂತೆ ಮಾರ್ಪಡಿಸಲಾಗಿದೆ.

1. ಶ್ರೀ ಎಂ.ಆರ್. ಹೆಗಡೆ, ಇವರು ಮರು ನೇಮಕಾತಿ ಅವಧಿಯಲ್ಲಿ ಕೆ.ಸಿ.ಎಸ್.ಆರ್. ನಿಯಮ 313(ಬಿ)ರನ್ವಯ ಮಾಸಿಕ ರೂ. 50,243/– ಮೂಲ ವೇತನವನ್ನು ಪಡೆಯಲು ಅರ್ಹರಿರುತ್ತಾರೆ.

2. ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನದ ರೂ. 80,000/–ಗಳಿಗೆ ಲಭ್ಯವಾಗುವ ಡಿಎ/ಹೆಚ್‌ಆರ್‌ಎ/ಸಿಸಿಎ ಗಳನ್ನು ಪಡೆಯಲು ಅರ್ಹರಿದ್ದು, ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆಯನ್ನು ಪಡೆಯಲು ಅರ್ಹರಿರುವುದಿಲ್ಲ ಮತ್ತು ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗುವುದಿಲ್ಲ.
3. ನಿವೃತ್ತ ನ್ಯಾಯಾಧೀಶರನ್ನು ನೇಮಕಾತಿ ಮಾಡಿದ ಸಮಯದಲ್ಲಿ ನೀಡುವ ಇತರ ಭತ್ಯೆಗಳಾದ Sumptuary allowance, T.A., D.A., Medical Allowance, LTC ಮುಂತಾದ ಸೌಲಭ್ಯಗಳನ್ನು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ಲಭ್ಯವಾಗುವ ದರದಲ್ಲಿ ಪಡೆಯಲು ಅರ್ಹರಿರುತ್ತಾರೆ.
4. ಸದರಿ ಅಧಿಕಾರಿಯು ಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾಗಿದ್ದು, ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1217 ಸೇ–3/11, ದಿನಾಂಕ : 12–12–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 71 ಸಿಅಸುಇ ಇಲಾಖೆ (ರಾಜ್ಯಕೀಯ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 15 ಎಸ್‌ಇಎಂ 1996, ದಿನಾಂಕ : 20–09–1996.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 15 ಸಸವಿ 1996, ದಿನಾಂಕ : 18–12–1996.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 15 ಸಸವಿ 1996, ದಿನಾಂಕ : 20–03–2002.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 68 ಸಸವಿ 2006, ದಿನಾಂಕ : 03–11–2006.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 32 ಸಅಸೇ 2008, ದಿನಾಂಕ : 07–03–2008.
6. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 496 ಸಅಸೇ 2009, ದಿನಾಂಕ : 31–12–2009.
7. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 196 ಸಅಸೇ 2009, ದಿನಾಂಕ : 19–06–2009.
8. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 82 ಸಅಸೇ 2009, ದಿನಾಂಕ : 09–02–2011.
9. ಅನಧಿಕೃತ ಟಿಪ್ಪಣಿ ಸಂಖ್ಯೆ : ಮೂಅಇ 97 ಮೂಇವಿ 2009, ದಿನಾಂಕ : 13–09–2011.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ 25 ಹುದ್ದೆಗಳನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ 2 ಹುದ್ದೆಗಳನ್ನು ಮತ್ತು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ 10 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (4) ಮತ್ತು (5) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿನ ಒಟ್ಟು 37 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 21–09–2010 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯು ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 21–09–2011 ರಿಂದ ಮತ್ತೊಂದು ವರ್ಷದ ಅವಧಿಯವರೆಗೆ ಮುಂದುವರಿಸಲು ಕೋರಿರುತ್ತದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮಂಜೂರಾಗಿರುವ ಕೆಳಕಂಡ 37 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 21–09–2011 ರಿಂದ ಮತ್ತೊಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 01 |
| | ಆಪ್ತ ಶಾಖೆ : | |
| | ಆಪ್ತ ಕಾರ್ಯದರ್ಶಿ | 01 |
| | ಶೀಘ್ರಲಿಪಿಗಾರರು | 02 |
| | ಭಾಷಾಂತರಕಾರರು (ಶಾಖಾಧಿಕಾರಿ ಅಥವಾ ಹಿರಿಯ ಸಹಾಯಕ) | |
| | ಕಿರಿಯ ಸಹಾಯಕರು | 01 |
| | ವಾಹನ ಚಾಲಕರು | 01 |
| | ದಲಾಯತ್ | 02 |
| | ಸರ್ಕಾರದ ಉಪ ಕಾರ್ಯದರ್ಶಿ | 01 |
| | ಆಪ್ತ ಶಾಖೆ :– | |
| | ಶೀಘ್ರಲಿಪಿಗಾರರು | 01 |

| | | |
|---|---|---|
| | ಕಿರಿಯ ಸಹಾಯಕರು | 02 |
| | ದಲಾಯತ್ | 01 |
| | ಪೀಠಾಧಿಕಾರಿ–ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ ವೃಂದ | 02 |
| | ಶೀಘ್ರಲಿಪಿಗಾರರು | 02 |
| | ಶಾಖಾಧಿಕಾರಿ | 01 |
| | ಹಿರಿಯ ಸಹಾಯಕರು | 01 |
| | ಸಹಾಯಕರು | 01 |
| | ಕಿರಿಯ ಸಹಾಯಕರು | 01 |
| | ಬೆರಳಚ್ಚುಗಾರರು | 01 |
| | ದಲಾಯತ್ | 01 |
| | ಆರ್ & ಐ ಶಾಖೆ :– | |
| | ಶಾಖಾಧಿಕಾರಿ | 01 |
| | ಕಿರಿಯ ಸಹಾಯಕರು | 02 |
| | ದಲಾಯತ್ | 01 |
| | ನಿರ್ದೇಶಕರು | 01 |
| | ಸಹಾಯಕ ನಿರ್ದೇಶಕರು | 02 |
| | ಅ) ಪ್ರೊಜೆಕ್ಟ್ ಮಾನಿಟರ್ ಅಂಡ್ ಇವ್ಯಾಲ್ಯುಯೇಶನ್ | 01 |
| | ಆ) ಇನವೆಸ್ಟರ್ಸ್ ಗೈಡೆನ್ಸ್ | 02 |
| | ಸೀನಿಯರ್ ಪ್ರೋಗ್ರಾಮರ್ | 03 |
| | ಜೂನಿಯರ್ ಪ್ರೋಗ್ರಾಮರ್ | 01 |
| | ಆಪ್ತ ಸಹಾಯಕರು ಹಾಗೂ ಇತರೆ ಸಿಬ್ಬಂದಿ | 37 |
| | ವಾಹನ ಚಾಲಕರು | |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 72 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಗಳ ಸಂರಕ್ಷಣೆ/ನಿರ್ವಹಣೆಗಾಗಿ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಪೂರಕ ಸಿಬ್ಬಂದಿಯೊಂದಿಗೆ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಕಡತ ಸಂಖ್ಯೆ : ಸಿಆಸುಇ 174 ಆಸಸೇ 2011.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ದಿನಾಂಕ 16–06–2011 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಐ.ಎ.ಎಸ್./ಐ.ಪಿ.ಎಸ್./ ಐ.ಎಫ್.ಎಸ್./ಕೆ.ಎ.ಎಸ್. ಮತ್ತು ಇಲಾಖಾ ಮುಖ್ಯಸ್ಥರುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಸಂರಕ್ಷಿಸುವ ಹಾಗೂ ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಸಚಿವಾಲಯದ ಮಟ್ಟದಲ್ಲಿ ಒಂದು ಅಧೀನ ಕಾರ್ಯದರ್ಶಿ, ಒಂದು ಶೀಘ್ರಲಿಪಿಗಾರ, ಒಂದು ಶಾಖಾಧಿಕಾರಿ, ಒಂದು ಹಿರಿಯ ಸಹಾಯಕ, ಒಂದು ಸಹಾಯಕ, ಒಂದು ಕಿರಿಯ ಸಹಾಯಕ, ಒಂದು ಬೆರಳಚ್ಚುಗಾರ ಮತ್ತು ಒಂದು ದಲಾಯತ್ ಹೀಗೆ ಒಟ್ಟು 8 ಹುದ್ದೆಗಳನ್ನು ಸೃಜಿಸುವ ಬಗ್ಗೆ ಪ್ರಸ್ತಾಪಿಸಲಾಗಿದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 497 ಸಆಸೇ 2011, ಬೆಂಗಳೂರು, ದಿನಾಂಕ 29ನೇ ಡಿಸೆಂಬರ್ 2011**

ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಐ.ಎ.ಎಸ್./ಐ.ಪಿ.ಎಸ್./ಐ.ಎಫ್.ಎಸ್./ ಕೆ.ಎ.ಎಸ್. ಮತ್ತು ಇಲಾಖಾ ಮುಖ್ಯಸ್ಥರುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಸಂರಕ್ಷಿಸುವ ಹಾಗೂ ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2 | ಶೀಘ್ರಲಿಪಿಗಾರರು | 1 |

| | | |
|---|---|---|
| 3 | ಶಾಖಾಧಿಕಾರಿ | 1 |
| 4 | ಕಿರಿಯ ಸಹಾಯಕ | 1 |
| 5 | ದಲಾಯತ್ | 1 |
| | **ಒಟ್ಟು** | **5** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 939 ವೆಚ್ಚ 12/2011, ದಿನಾಂಕ 25–11–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–3)

ಪಿ.ಆರ್. 73

## PERSONNEL AND ADMINISTRATIVE REFORMS SECRETARIAT

**SUB :** Implementation of recommendation of Thirteenth Finance Commission-Issue of Guidelines for utilization of grant-in-aid for District Innovation Fund and preparation of action plan.

**READ :** 1. Letter No. F.No. 37 (1)FCD/2010, dated 15-03-2011 received from the Ministry of Finance, Department of Expenditure, Finance Commission Division, Government of India.

**PREAMBLE:**

In the letter dated 15-03-2011 read at (1) above the Ministry of Finance, Department of Expenditure, Finance Commission Division, Government of India have formulated the guidelines for grant of release and utilization of grant-in-aid for District Innovation Fund along with Proforma for furnishing information on projects/action plan under scheme for implementation of District Innovation Fund as recommended by the Thirteenth Finance Commission. Thirteenth Finance Commission has recommended Rs. 1 Crore per district, aimed at increasing the efficiency of capital assets already created and provide immediate benefits. Government of Karnataka after following the instructions of Government of India and after careful consideration issues the following order.

**GOVERNMENT ORDER NO. DPAR 90 KTP 2010, BANGALORE, DATED : 23RD DECEMBER 2011**

The Thirteenth Finance Commission has recommended a grants of Rs. 29 Crores to Karnataka for “District Innovation Fund” (DIF) at the rate of Rs. 1 Crore per district. The guidelines for preparation of action plan/proposals/projects under District Innovation Fund is as follows.

2) The object of DIF is to make cutting edge levels of governance responsive to felt needs and innovation and aims at increasing the efficiency of capital assets already created. This investment will be used to fill in vital gaps in public infrastructure already available in the district, which is not being fully utilized for want of a relatively small investment. Examples include a government hospital with non-functional diagnostic equipment; a minor irrigation tank with sizeable command and leaking sluice gates; an area with poor agricultural productivity without soil testing facilities. The object of the DIF will be to renew or better utilize an existing capital asset land provide immediate benefits. Such projects with immediate welfare returns for comparatively low investment are best identified at the district level. The following conditions are applicable to the release of this grant :

a) projects undertaken under the scheme should be demand driven rather than supply driven;

b) the scheme should be conductive to triggering innovative measures to make government accessible and accountable to all sections of society;

c) at the district level, only 90% of the cost of a project be met from DIF, the balance 10% being met from non-governmental contributions, from either the public or NGOs. This 10% must be collected and deposited with the district agency before the scheme is sanctioned.

3) The grants will be released in two installments during 2011-15. The first installment, amounting to 50% will be released in 2011-12 by Government of India, after the State Government finalized detailed guidelines for implementation of the scheme, and notifies the authority at the district level that would sanction the projects under the scheme. The second installment will be released by Government of India, after the State Government submits a report on the end use of the first installment detailing the benefits created. To generate competition, if some districts come up with more innovative projects for support, then unutilized funds from the remaining districts can be reallocated to those.

4) The Deputy Commissioner of the concerned district will be the authority at the district level to select the projects under the scheme. Deputy Commissioner of the concerned district has to form a committee to be chaired by her/him to select the project under the scheme and send the same for approval to the State Government. Further the onus of preparing the action plan/proposals/projects selected under the scheme, submission of utilization certificated and work completion certificates rests with the concerned Deputy Commissioner of the concerned district.

The High Level Monitoring Committee (HLMC) headed by the Additional Chief Secretary to Government would be monitoring both physical and financial targets performance and ensuring adherence to the specific conditionalities associated with the grant.

**Proforma for furnishing information on Projects under sheme formulated for implementation of the District Innovation Fund recommended by the 13th Finance Commission**

State :

1. Name of the District :
2. Name of the Project :
3. Objectives of the Project :
4. Name of the implementing agency :
5. Intended benefits out of the Project :
6. Total cost of the Project :
7. Funding Pattern :
   (i) from grant-in-aid
   (ii) from non-governmental contributions (Public or NGO). Please specify amount and date of deposit with implementing agency.
8. Date of approval of the project by the designated authority :
9. Benefits created or realized as assessed against the intended benefits as in item No. 5 above:
   **Proforma can be down loaded from website:**
   **http://www/finmin.nic.in/TFC/guidelines.asp**

By Order and in the name of the Governor of Karnataka,

**BHARATHI R. NAYAK,**

Under Secretary to Government,

DPAR-AR (Training)

PR. 74

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಪಾಲನ ಹಾಗೂ ಪಶು ವೈದ್ಯಕೀಯ ಸೇವಾ ಇಲಾಖೆ, ಇಲಾಖಾ ವಿಚಾರಣೆಯ ಅಂತಿಮ ಆದೇಶ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 08 ಇಮುವಿ 2008, ಬೆಂಗಳೂರು, ದಿನಾಂಕ 08–02–2011.
2. ಸರ್ಕಾರದ ಜ್ಞಾಪನ ಪತ್ರ ಸಂಖ್ಯೆ : ಸಿಆಸುಇ 08 ಇಮುವಿ 2008, ಬೆಂಗಳೂರು, ದಿನಾಂಕ 08–02–2011.
3. ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಇವರ ಹೇಳಿಕೆ ದಿನಾಂಕ 02–04–2011.

**ಪ್ರಸ್ತಾವನೆ :**

ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಸಂಗೋಪನೆ ಹಾಗೂ ಪಶು ವೈದ್ಯಕೀಯ ಸೇವಾ ಇಲಾಖೆ, ಇವರು ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಔಷಧ ರಾಸಾಯನಿಕ ಮತ್ತು ಆಸ್ಪತ್ರೆ ಪರಿಕರಗಳ ಖರೀದಿಗಾಗಿ ಹೊಸ ದರ ಗುತ್ತಿಗೆ ನವೀಕರಿಸಲು ದೀರ್ಘ ವಿಳಂಬ ಮಾಡಿದ ಬಗ್ಗೆ ಹಾಗೂ ದರ ಗುತ್ತಿಗೆದಾರರ ಕರಾರು ಪತ್ರಗಳಿಗೆ ಸಹಿ ಮಾಡದೇ ಕರ್ತವ್ಯ ಲೋಪ ಎಸಗಿರುವುದು, 2007–08ನೇ ಸಾಲಿನಲ್ಲಿ ಔಷಧ ರಾಸಾಯನಿಕ ಮತ್ತು ಆಸ್ಪತ್ರೆ ಪರಿಕರಗಳ ಖರೀದಿಗಾಗಿ ಹೊಸ ದರ ಗುತ್ತಿಗೆ ಕರೆದ ಸಂದರ್ಭದಲ್ಲಿ ಸಕಾಲದಲ್ಲಿ ಟೆಂಡರ್ ಪರಿಶೀಲನಾ ಸಮಿತಿಯು ಟೆಂಡರ್‌ನ್ನು ಪರಿಶೀಲಿಸಿ, ಅಂಗೀಕಾರ ಸಮಿತಿಗೆ ವರದಿಯನ್ನು ಕಳುಹಿಸದೇ ಅನಗತ್ಯ ವಿಳಂಬ ಮಾಡಿರುವುದು, ವಿಧಾನ ಮಂಡಲ ಅಧಿವೇಶನ ನಡೆದ ಸಂದರ್ಭಗಳಲ್ಲಿ ಒಂದು ಬಾರಿಯೂ ಖುದ್ದಾಗಿ ಸಚಿವರನ್ನು ಭೇಟಿ ಮಾಡಿ ಉತ್ತರಗಳ ಬಗ್ಗೆ ವಿವರಿಸದೇ ನಿರ್ಲಕ್ಷತೆ ತೋರಿರುವುದು ಇಲಾಖಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಅಸಡ್ಡೆ ತೋರಿ ನಿರ್ಲಕ್ಷತೆಯಿಂದಾಗಿ ಕಾರ್ಯಕ್ರಮಗಳಲ್ಲಿ ಅಭಿವೃದ್ಧಿಯಾಗದೇ ಇರುವುದು, ಕೆ.ಎಲ್.ಡಿ.ಎ. ಕಾರ್ಯಕ್ರಮಗಳಿಗೆ ಕೇಂದ್ರ ಸರ್ಕಾರ ನೀಡಿರುವ ಅನುದಾನವನ್ನು ಸಕಾಲದಲ್ಲಿ ವಿನಿಯೋಗಿಸದೇ ಪ್ರಗತಿ ಸಾಧಿಸದೇ ಈ ಕಾರ್ಯಕ್ರಮವು ಕೆ.ಎಂ.ಎಫ್.ಗೆ ಹೋಗಲು ಕಾರಣರಾಗಿರುವುದು, ಇಲಾಖಾ ಮುಖ್ಯಸ್ಥರು ಆಯುಕ್ತರೆಂದು ಆದೇಶವಾಗಿದ್ದರೂ ಸಹ ಡಾ॥ ಎನ್. ರಾಜಗೋಪಾಲ್, ನಿರ್ದೇಶಕರು ಇವರು ಮೇಲಿನ ಅಧಿಕಾರಿಗಳನ್ನು ಕಡೆಗಣಿಸಿ ನೇರವಾಗಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರಸ್ತಾವನೆಯನ್ನು ಕಳುಹಿಸಿರುವುದು ಇತ್ಯಾದಿ ಆರೋಪಗಳಿಗಾಗಿ ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶು ವೈದ್ಯ ಸೇವಾ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಅವಶ್ಯಕತೆ ಕಂಡುಬಂದಿರುವುದರಿಂದ ಮೇಲೆ ಓದಲಾದ (1)ರ ದಿನಾಂಕ 08–02–2011 ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮವಾಳಿಯ ನಿಯಮ 214 (2) (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳಿಗಾಗಿ ಶಿಸ್ತುಕ್ರಮ ಜರುಗಿಸಬಹುದೆಂದು ಆದೇಶಿಸಲಾಗಿತ್ತು. ಮೇಲೆ ಓದಲಾದ (2)ರ ಜ್ಞಾಪನ ಪತ್ರ ದಿನಾಂಕ 08–02–2011 ರಂದು ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಇವರಿಗೆ ನೋಟಿಸ್ ಜಾರಿ ಮಾಡಲಾಗಿತ್ತು. ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಸದರಿ ನೋಟಿಸ್‌ಗೆ ಮೇಲೆ ಓದಲಾದ (3)ರ ದಿನಾಂಕ 02–04–2011 ರಂದು ಈ ಕೆಳಕಂಡಂತೆ ತಮ್ಮ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

**ಆರೋಪ–1 :–**

ಇಲಾಖಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅನಗತ್ಯ ವಿಳಂಬಕ್ಕೆ ಹಾಗೂ ಅಡಚಣೆಗೆ ಕಾರಣರಾಗಿರುವ ಆರೋಪದ ಬಗ್ಗೆ ಯಾವ ಯಾವ ಕಾರ್ಯಕ್ರಮಗಳಿಗೆ ಅಡಚಣೆಯಾಗಿದೆ ಎಂಬ ಬಗ್ಗೆ ಸ್ಪಷ್ಟತೆ ಇರುವುದಿಲ್ಲ. ಔಷಧಿ ಮತ್ತು ರಾಸಾಯನಿಕಗಳಿಗೆ ಸಂಬಂಧಿಸಿದಂತೆ ಚಾಲ್ತಿಯಲ್ಲಿದ್ದ ದರಗುತ್ತಿಗೆಯನ್ನು ವಿಸ್ತರಿಸುವ ಬಗ್ಗೆ ಮುಂಚಿತವಾಗಿ ದಿನಾಂಕ 07–02–2006 ರಲ್ಲಿ ಪ್ರಸ್ತಾಪಿಸಲಾಗಿದ್ದು, ಟೆಂಡರ್, ಪರಿಷ್ಕೃತ ನಿಬಂಧನೆ ಮತ್ತು ನಮೂನೆಗಳನ್ನು ಆಯುಕ್ತರು ಆರ್ಥಿಕ ಇಲಾಖೆಯಿಂದ ಪಡೆಯುವಲ್ಲಿ ವಿಳಂಬವಾಗಿದ್ದು ದಿನಾಂಕ 27–12–2006ರ ಆಯುಕ್ತರ ಟಿಪ್ಪಣಿಯಲ್ಲಿ ಹೊಸದರ

ಗುತ್ತಿಗೆ ನಿಗದಿಪಡಿಸಲು ಸಮಯ ಬೇಕಾಗಿರುವುದೆಂದು ಮುಂಚಿತವಾಗಿ ಗ್ರಹಿಸಿರುವುದರಿಂದ ಅಂದಿನ ಜಂಟಿ ನಿರ್ದೇಶಕರಿಗೆ ಸಭೆ ಕರೆಯಲು ಸೂಚಿಸಿದ್ದರೂ ಸಹ ಸಭೆ ಕರೆಯದೇ ಲೋಪ ಎಸಗಿದ ಬಗ್ಗೆ ಆಯುಕ್ತರ ಮೂಲಕ ಸರ್ಕಾರಕ್ಕೆ ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಪ್ರಸ್ತಾಪಿಸಿದ್ದಾಗ್ಯೂ ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳದೇ ತಟಸ್ಥ ನೀತಿ ಅನುಸರಿಸಿರುವುದನ್ನು ಹಾಗೂ ಶ್ರೀ ಗೊಂಡಶೆಟ್ಟಿಯವರನ್ನು ಸಮಿತಿಯಿಂದ ಬದಲಾಯಿಸುವ ಪ್ರಸ್ತಾಪಕ್ಕೆ ಒಪ್ಪದೇ ಸಮಿತಿಯಲ್ಲೇ ಮುಂದುವರಿಸಲು ಆಯುಕ್ತರು ಸೂಚಿಸಿದ್ದರಿಂದ ಉಂಟಾದ ವಿಳಂಬಕ್ಕೆ ಕಾರಣನಾಗಿರುವುದಿಲ್ಲವೆಂದು ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

**ಆರೋಪ–2 :–**

ಔಷಧಿ ರಾಸಾಯನಿಕ ಖರೀದಿಗೆ ಸಂಬಂಧಿಸಿದ ವ್ಯವಹಾರವನ್ನು ಆಯುಕ್ತರ ಕೋರಿಕೆ ಮೇರೆಗೆ ತಾಂತ್ರಿಕ ಕ್ಷಮತೆಯಿಂದ ಹಾಗೂ ಈ ಬಗ್ಗೆ ಅನುಭವವುಳ್ಳ ನಿರ್ದೇಶಕರನ್ನು ಬದಿಗಿರಿಸಿ ಆಯುಕ್ತರು ಹಾಗೂ ಅಪರ ನಿರ್ದೇಶಕರು (ಆಡಳಿತ) ಇವರುಗಳ ನಡುವೆಯೇ ನೇರವಾಗಿ ನಡೆಸಲು ದಿನಾಂಕ 27–11–2007ರ ಸರ್ಕಾರಿ ಆದೇಶ ಪಡೆದಿದ್ದು ಇದರಿಂದ ಟೆಂಡರ್ 'ಬಿ' ಕವರ್ ತೆರೆಯುವ ಬಗ್ಗೆ ಅವಧಿ ವಿಸ್ತರಣೆ ಕೋರಿರುವ ವಿಚಾರವು ಗಮನಕ್ಕೆ ಬಂದಿರುವುದಿಲ್ಲ. ಆದ್ದರಿಂದ ಈ ಆರೋಪವು ನಿರಾಧಾರವಾಗಿದೆ ಎಂದು ಹೇಳಿಕೆಯಲ್ಲಿ ಸಲ್ಲಿಸಿರುತ್ತಾರೆ.

**ಆರೋಪ–3 :–**

ಕಲಾಪಗಳಿಗೆ ಸಂಬಂಧಿಸಿದಂತೆ ಇಲಾಖಾ ಸಚಿವರನ್ನು ಖುದ್ದಾಗಿ ಭೇಟಿ ಮಾಡಿ ಉತ್ತರ ಸಲ್ಲಿಸಲು ಸೂಚನೆಗಳಿರುವುದಿಲ್ಲ ಹಾಗೂ ಈ ಬಗ್ಗೆ ಮಾನ್ಯ ಸಚಿವರು ಕರೆದ ಎಲ್ಲಾ ಸಭೆಗಳಲ್ಲಿ ಖುದ್ದಾಗಿ ಹಾಜರಾಗಿ ಮಾಹಿತಿ ನೀಡಲಾಗಿದೆ ಆದ್ದರಿಂದ ಈ ಆರೋಪವು ನಿರಾಧಾರವಾಗಿದೆಯೆಂದು ತಿಳಿಸಲಾಗಿದೆ.

**ಆರೋಪ–4 :–**

ಕೆ.ಟಿ.ಪಿ.ಪಿ. ಕಾಯಿದೆ ಅಧಿನಿಯಮದಡಿ ಹೊರಡಿಸಲಾದ ನಿಯಮಗಳನ್ನು ಪಾಲಿಸಿದ ಬಗ್ಗೆ ಅನುದಾನ ಲಭ್ಯತೆ ಗುತ್ತಿಗೆದಾರರಿಗೆ ಕೃಷಿ ಕೆಲಸದಲ್ಲಿರುವ ಅನುಭವ, ಕನಿಷ್ಠ ವೇತನ ಪಾವತಿ ಇವುಗಳ ಬಗ್ಗೆ ಖಚಿತ ಪಡಿಸುವ ಸಂಬಂಧ ಕ್ಷೇತ್ರ ಅಧಿಕಾರಿ ಹಾಗೂ ಸಂಬಂಧಪಟ್ಟ ಶಾಖೆಯ ಅಧಿಕಾರಿಯ ಅಭಿಪ್ರಾಯ ಪಡೆಯುವ ಚಾಲ್ತಿಯಲ್ಲಿದ್ದ ವಿಚಾರಗಳಂತೆ ಕ್ಷೇತ್ರಗಳಿಂದ ರಾಸುಗಳ ಪಾಲನೆ ಪೋಷಣೆಗೆ ಧಕ್ಕೆಯಾದ ಬಗ್ಗೆ ಕಡತವು 4 ತಿಂಗಳು ಅವರ ಬಳಿ ಇಲ್ಲವೆಂದು ತಿಳಿಸಿ ಈ ಆರೋಪವು ನಿರಾಧಾರವಾಗಿದೆಯೆಂದು ತಿಳಿಸಲಾಗಿದೆ.

**ಆರೋಪ–5 :–**

ಭಾರತ ಸರ್ಕಾರದ ಕಾರ್ಯದರ್ಶಿಗಳು ಭೇಟಿ ನೀಡಿದ ದಿನಾಂಕ ಹಾಗೂ ಕೆ.ಎಲ್.ಡಿ.ಎ. ಕಾರ್ಯಕ್ರಮ ಪರಿಶೀಲಿಸಿದ ಬಗ್ಗೆ ಹಾಗೂ ಈ ಕಾರ್ಯಕ್ರಮಗಳಿಗೆ ನೀಡಿದ ಅನುದಾನ ಉಪಯೋಗಿಸಿದ ವಿನಿಯೋಗ ಪತ್ರವನ್ನು ಸಲ್ಲಿಸಲು ನಿಗದಿಪಡಿಸಿರುವ ದಿನಾಂಕ ಹಾಗೂ ಈ ಕಾರಣದಿಂದ ಮುಂದಿನ ವರ್ಷದ ಅನುದಾನ ಬಿಡುಗಡೆಯಾಗಿರುವುದಿಲ್ಲವೆಂಬ ಹಾಗೂ 2005–06, 2006–07ರ ಯೋಜನೆಗಳ ಅನುಷ್ಠಾನಗಳಲ್ಲಿ ಯಾವುದೇ ಆಸಕ್ತಿ ಇಲ್ಲದಿರುವ ಬಗ್ಗೆ ದೃಢಪಟ್ಟಿರುವ ಹಾಗೂ ಮೈಕ್ರೋಪ್ಲಾನ್ ಸಲ್ಲಿಸಲು ನಿಗದಿಪಡಿಸಲಾದ ದಿನಾಂಕದ ಹಾಗೂ ಇದರಿಂದ ಭಾರತ ಸರ್ಕಾರದ ಹಣ ಬಿಡುಗಡೆಯಾಗಿರುವುದಿಲ್ಲವೆಂಬ ಬಗ್ಗೆ ದಾಖಲಾತಿಗಳನ್ನು ಒದಗಿಸಿರುವುದಿಲ್ಲವೆಂದು ತಿಳಿಸಿ ಆರೋಪಗಳು ನಿರಾಧಾರವೆಂದು ತಮ್ಮ ಹೇಳಿಕೆಗಳಲ್ಲಿ ತಿಳಿಸಿರುತ್ತಾರೆ.

**ಆರೋಪ–6 :–**

ಸದರಿ ಅಧಿಕಾರಿಯವರು ತಮಗೆ ಪಶು ವೈದ್ಯಕೀಯ ಸೇವಾ ಇಲಾಖೆಯಲ್ಲಿ ಅಪಾರ ಅನುಭವವಿದ್ದು, ಆಯುಕ್ತರನ್ನು ಇಲಾಖಾ ಮುಖ್ಯಸ್ಥರಾಗಿ ಘೋಷಿಸಿರುವ ದಾಖಲಾತಿಗಳನ್ನು ಒದಗಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸಾಮಾನ್ಯವಾಗಿ ಆಯುಕ್ತರು ನಿರ್ದೇಶಕರ ಹುದ್ದೆಗಿಂತ ಮೇಲಾಧಿಕಾರಿಗಳಾಗಿರುತ್ತಾರೆ. ಅದು ಆರೋಪಿತ ಅಧಿಕಾರಿಗಳ ಗಮನಕ್ಕೆ ತಿಳಿಯದಾಗಿರುತ್ತದೆ.

ಮೇಲಿನ ಹೇಳಿಕೆಗಳನ್ನು ಪರಿಶೀಲಿಸಲಾಗಿದ್ದು, ಸದರಿ ಅಧಿಕಾರಿಯವರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲದ ಕಾರಣದಿಂದಾಗಿ ಹಾಗೂ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ವಿಧಿ ವಿಧಾನಗಳು ಉಲ್ಲಂಘನೆಯಾಗಿಲ್ಲವೆಂಬುದು ಕಂಡುಬರುವುದರಿಂದ ಅಧಿಕಾರಿಯವರ ಹೇಳಿಕೆಗಳನ್ನು ಒಪ್ಪಿಕೊಂಡು ಸದರಿ ಅಧಿಕಾರಿಯವರ ವಿರುದ್ಧ ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅವರ ಆರೋಪ ಮುಕ್ತರನ್ನಾಗಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಇಮುವಿ 2008, ಬೆಂಗಳೂರು, ದಿನಾಂಕ 22ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಅವರ ವಿರುದ್ಧ ಮಾಡಲಾದ ಆರೋಪಗಳಿಂದ ದೋಷ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಡಾ॥ ಎನ್. ರಾಜಗೋಪಾಲ್, ನಿವೃತ್ತ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ ಇವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು–3)

ಪಿ.ಆರ್. 75

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಅಧಿಕಾರಿಗಳು/ರಾಜ್ಯ ಸಾರ್ವಜನಿಕ ವಲಯ ಉದ್ಯಮಗಳ ಕಾರ್ಯನಿರ್ವಾಹಕರು ಕರ್ತವ್ಯದ ಮೇಲೆ ದೇಶದಿಂದ ಹೊರಗೆ ಕೈಗೊಳ್ಳುವ ಪ್ರಯಾಣಗಳಿಗೆ ಸಂಬಂಧಪಟ್ಟಂತೆ ಪ್ರತಿದಿನದ ಭತ್ಯೆ, ಹೊಟೇಲ್ ಸ್ಥಳಾವಕಾಶ ಮತ್ತು ಇತರ ವೆಚ್ಚಗಳ ಸಂದಾಯದ ವಿನಿಯಮನ ಮಾರ್ಗದರ್ಶನ ಸೂತ್ರಗಳು.

**ಓದಲಾಗಿದೆ :**
1. ಸರ್ಕಾರಿ ಆದೇಶ: ಆಇ 04 ಎಸ್ಆರ್ಎ 1997, ದಿನಾಂಕ 28–04–1997.
2. ಸರ್ಕಾರಿ ಆದೇಶ: ಆಇ 07 ಎಸ್ಆರ್ಎ 2001, ದಿನಾಂಕ 12–09–2001.
3. ಭಾರತ ಸರ್ಕಾರದ ವಿದೇಶಾಂಗ ವ್ಯವಹಾರಗಳ ಮಂತ್ರಾಲಯದ ಆದೇಶ ಸಂಖ್ಯೆ : Q/FD/ 695/3/2000, ದಿನಾಂಕ 01–12–2000.
4. ಸರ್ಕಾರಿ ಆದೇಶ : ಆಇ 09 ಎಸ್ಆರ್ಎ 2000, ದಿನಾಂಕ 20–11–2003.
5. ಭಾರತ ಸರ್ಕಾರದ ವಿದೇಶಾಂಗ ವ್ಯವಹಾರಗಳ ಮಂತ್ರಾಲಯದ ಆದೇಶ ಸಂಖ್ಯೆ : Q/FD/ 695/3/2000, ದಿನಾಂಕ 21–09–2010.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ಪರಿಶಿಷ್ಟ–III ರ 4ನೇ ನಿಯಮದ ಅನುಸಾರವಾಗಿ ವಿವಿಧ ದೇಶಗಳಿಗೆ ಮಾಡುವ ಪ್ರಯಾಣ ಮತ್ತು ತಂಗುವಿಕೆಗಳಿಗೆ ಭಾರತ ಸರ್ಕಾರವು ಕಾಲಕಾಲಕ್ಕೆ ಗೊತ್ತುಪಡಿಸುವ ದರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಸರ್ಕಾರವು, ಅಧಿಕಾರಿಗಳು ಪ್ರಯಾಣ ಮಾಡುವ ದೇಶದಲ್ಲಿ ಇಳಿಯುವ ದಿನಾಂಕದಿಂದ ಪುನಃ ಭಾರತಕ್ಕೆ ಮರಳುವ ದಿನಾಂಕದವರೆಗೆ ಸಂದಾಯ ಮಾಡಬೇಕಾದ ಪ್ರಯಾಣದ ವೆಚ್ಚಗಳು ಹಾಗೂ ದಿನಭತ್ಯೆಯನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ನಿಗದಿಪಡಿಸುತ್ತದೆ.

ಭಾರತ ಸರ್ಕಾರದ ದಿನಾಂಕ 01–12–2000ರ ಆದೇಶ ಸಂಖ್ಯೆ Q/FD/695/2000 ರಲ್ಲಿ ಗೊತ್ತುಪಡಿಸಿದ ದರಗಳನ್ನು ಆಧರಿಸಿ, ರಾಜ್ಯ ಸರ್ಕಾರವು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ 20–11–2003ರ ಸರ್ಕಾರಿ ಆದೇಶದಲ್ಲಿ, ರಾಜ್ಯ ಸರ್ಕಾರದ ಅಧಿಕಾರಿಗಳು/ಸಾರ್ವಜನಿಕ ವಲಯದ ಉದ್ಯಮಗಳ ಕಾರ್ಯನಿರ್ವಾಹಕರು ಕರ್ತವ್ಯದ ಮೇಲೆ ದೇಶದ ಹೊರಗಡೆ ಕೈಗೊಳ್ಳುವ ಪ್ರಯಾಣಗಳಿಗೆ ಪ್ರಯಾಣ ವೆಚ್ಚಗಳ ಮತ್ತು ಪ್ರತಿ ದಿನದ ಭತ್ಯೆಗಳ ದರಗಳನ್ನು ನಿಗದಿಪಡಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ 21–09–2010ರ ಆದೇಶದಲ್ಲಿ ಭಾರತ ಸರ್ಕಾರವು, ತನ್ನ ಹಿಂದಿನ ದಿನಾಂಕ 01–12–2000ರ ಆದೇಶವನ್ನು ರದ್ದುಪಡಿಸಿ, ವಿದೇಶಗಳಲ್ಲಿನ ಕರ್ತವ್ಯದ ಪ್ರಯಾಣಗಳಿಗೆ ಸಂಬಂಧಿಸಿದಂತೆ ಈ ಹಿಂದೆ ವಿಧಿಸಲಾಗಿದ್ದ ಶೇ.25 ಕಡಿತವನ್ನು ಹಿಂಪಡೆದಿದೆ ಮತ್ತು ವಿದೇಶಗಳಲ್ಲಿ ಕರ್ತವ್ಯದ ಮೇಲೆ ಕೈಗೊಳ್ಳುವ ಪ್ರಯಾಣಗಳಿಗೆ ಸಂದಾಯ ಮಾಡಬೇಕಾದ ದಿನಭತ್ಯೆಯ ದರಗಳನ್ನು ದಿನಾಂಕ 21–09–2010ರ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಪರಿಷ್ಕರಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳ ಪರಿಶಿಷ್ಟ–III ರ 4ನೇ ನಿಯಮದಲ್ಲಿ ಒಳಗೊಂಡ ಉಪಬಂಧಗಳ ಹಾಗೂ ಹೊರದೇಶಗಳಿಗೆ ಕರ್ತವ್ಯದ ಮೇಲೆ ಕೈಗೊಳ್ಳುವ ಪ್ರಯಾಣಗಳಿಗೆ ಅನ್ವಯವಾಗುವ ದಿನಭತ್ಯೆಯ ದರಗಳ ಸಂಬಂಧದಲ್ಲಿ ಭಾರತ ಸರ್ಕಾರದ ದಿನಾಂಕ 21–09–2010ರ ಆದೇಶವನ್ನು ಆಧರಿಸಿ, ಸರ್ಕಾರವು ಕರ್ತವ್ಯದ ಮೇಲೆ ಅಧಿಕಾರಿಗಳು ವಿದೇಶಗಳಿಗೆ ಕೈಗೊಳ್ಳುವ ಪ್ರಯಾಣಗಳಿಗೆ ಅನ್ವಯವಾಗುವ ದಿನಭತ್ಯೆಯ ದರಗಳನ್ನು ಪರಿಷ್ಕರಿಸುವುದು ಅವಶ್ಯವೆಂದು ಪರಿಗಣಿಸಿ, ಈ ಮುಂದಿನ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 03 ಎಸ್ಆರ್ಎ 2011, ಬೆಂಗಳೂರು, ದಿನಾಂಕ 17ನೇ ಡಿಸೆಂಬರ್ 2011**

ರಾಜ್ಯ ಸರ್ಕಾರದ ಅಧಿಕಾರಿಗಳು/ರಾಜ್ಯ ಸಾರ್ವಜನಿಕ ವಲಯ ಉದ್ಯಮಗಳ ಕಾರ್ಯನಿರ್ವಾಹಕರು, ಇತರ ನೌಕರರು ಕರ್ತವ್ಯದ ಮೇಲೆ ಹೊರ ದೇಶಗಳಲ್ಲಿ ಕೈಗೊಳ್ಳುವ ಪ್ರಯಾಣಗಳಿಗೆ ದಿನ ಭತ್ಯೆ/ ಹೊಟೇಲ್‌ನಲ್ಲಿಯ ಸ್ಥಳಾವಕಾಶದ ವೆಚ್ಚಗಳು/ ಇತರ ವೆಚ್ಚಗಳು ಮೊದಲಾದವುಗಳನ್ನು ಸಂದಾಯ ಮಾಡುವುದಕ್ಕೆ ಸಂಬಂಧಪಟ್ಟಂತೆ ಹಿಂದಿನ ಆದೇಶಗಳು/ಸೂಚನೆಗಳನ್ನು ರದ್ದುಗೊಳಿಸಿ, ಸರ್ಕಾರವು ಈ ಮುಂದಿನ ಆದೇಶವನ್ನು ಹೊರಡಿಸಿದೆ.

2. ದಿನ ಭತ್ಯೆ, ಹೊಟೇಲ್ ಬಾಡಿಗೆ ಮತ್ತು ಸ್ಥಳೀಯ ಸಾರಿಗೆ ವೆಚ್ಚಗಳಂತಹ ಪ್ರತಿ ದಿನದ ಭತ್ಯೆಗಳು ಈ ಮುಂದಿನಂತೆ ಅನ್ವಯವಾಗುತ್ತವೆ :–

| ಅಧಿಕಾರಿಗಳ ಪದನಾಮ | ದಿನಭತ್ಯೆ | ಹಾಸಿಗೆ ಮತ್ತು ಉಪಹಾರ ವಾಸ್ತವಿಕಗಳು ಒಳಗೊಂಡಂತೆ ಹೊಟೇಲು ಬಾಡಿಗೆ ಈ ಮುಂದಿನದಕ್ಕಿಂತ ಹೆಚ್ಚಾಗದಿರುವಂತೆ | ಸ್ಥಳೀಯ ಸಾರಿಗೆ ವೆಚ್ಚಗಳು |
|---|---|---|---|
| | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) |
| 1 | 2 | 3 | 4 |
| (ಎ) **1ನೇ ದರ್ಜೆ** : ಪ್ರಧಾನ ಕಾರ್ಯದರ್ಶಿ ಗಳು ಮತ್ತು ಅದಕ್ಕೂ ಮೇಲ್ಪಟ್ಟ ಹುದ್ದೆಗಳಲ್ಲಿ ರುವ | 100<br>ಆಸ್ಟ್ರೇಲಿಯಾ, ಆಸ್ಟ್ರಿಯ, ಬೆಲ್ಜಿಯಂ, ಬ್ರುನ್ಸಿ, ಕೆನಡ, ಚೈನಾ, ಸೈಪ್ರಸ್, ಡೆನ್ಮಾರ್ಕ್, ಫಿಜಿ, ಫಿನ್‌ಲ್ಯಾಂಡ್, ಫ್ರಾನ್ಸ್, ಜರ್ಮನಿ, ಝಿಬ್ರಾಲ್ಟರ್, ಗ್ರೀಸ್, ಹಾಂಗ್‌ಕಾಂಗ್, ಹೋಲಿಸೀ (ವ್ಯಾಟಿಕಾನ್), | 250 | 25 |

| | | | |
|---|---|---|---|
| ಅಧಿಕಾರಿಗಳು/ ಸರ್ಕಾರದ ಪ್ರಧಾನ ಕಾರ್ಯದರ್ಶಿಯ ವೇತನ ಶ್ರೇಣಿಗಿಂತ ಕಡಿಮೆ ಇರದಿರುವ ಸಾರ್ವಜನಿಕ ವಲಯ ಉದ್ಯಮಗಳ ಮುಖ್ಯ ಕಾರ್ಯನಿರ್ವಾಹಕರು ಅಥವಾ ಅದರ ಅಧ್ಯಕ್ಷರು | ಐಸ್ ಲ್ಯಾಂಡ್, ಐರ್ಲ್ಯಾಂಡ್, ಇಟಲಿ, ಜಪಾನ್, ಕೊರಿಯಾ (ದಕ್ಷಿಣ), ಲೀಥುವೇನಿಯಾ, ಲಾಕ್ಸಂಬರ್ಗ್, ಮಾಕೋವಾ, ಮಾಲ್ಟ, ಮೈಕ್ರೋನೇಸಿಯಾ, ನೆದರ್ಲ್ಯಾಂಡ್, ನ್ಯೂಸಿಲ್ಯಾಂಡ್, ನಾರ್ವೆ, ಪಾಪ ನ್ಯೂಗಿನಿ, ಪ್ರಿನ್ಸಿಪಾಲಿಟಿ ಆಫ್ ಲಿಚ್ ಟೆನ್‌ಸ್ಟಿನ್ (ವದಸ್), ಪೋರ್ಚುಗಲ್, ರಿಪಬ್ಲಿಕ್ ಆಫ್ ಸಾಲ್ವೇನಿಯಾ, ರಿಪಬ್ಲಿಕ್ ಆಫ್ ಸಾನ್ಮೇರಿನೊ, ರೋಮೇನಿಯಾ, ಸ್ಪೇನ್, ಸ್ವೀಡನ್, ಸ್ವಿಡ್ಜರ್ಲ್ಯಾಂಡ್, ಟರ್ಕಿ, ಯು.ಕೆ. ಯು.ಎಸ್.ಎ. – ಇವುಗಳಲ್ಲಿ | | |
| (ಬಿ) **2ನೇ ದರ್ಜೆ** : ರಾಜ್ಯ ಸರ್ಕಾರದ/ ಸಾರ್ವಜನಿಕ ವಲಯ ಉದ್ಯಮಗಳ ಇತರ ಅಧಿಕಾರಿಗಳು | 100<br>ಆಸ್ಟ್ರೇಲಿಯಾ, ಆಸ್ಟ್ರೀಯ, ಬೆಲ್ಜಿಯಂ, ಬ್ರುನ್ಸಿ, ಕೆನಡ, ಚೈನಾ, ಸೈಪ್ರಸ್, ಡೆನ್ಮಾರ್ಕ್, ಫಿಜಿ, ಫಿನ್‌ಲ್ಯಾಂಡ್, ಫ್ರಾನ್ಸ್, ಜರ್ಮನಿ, ಝಿಬ್ರಾಲ್ಟರ್, ಗ್ರೀಸ್, ಹಾಂಗ್‌ಕಾಂಗ್, ಹೋಲಿಸೀ (ವ್ಯಾಟಿಕಾನ್), ಐಸ್ ಲ್ಯಾಂಡ್, ಐರ್ಲ್ಯಾಂಡ್, ಇಟಲಿ, ಜಪಾನ್, ಕೊರಿಯಾ (ದಕ್ಷಿಣ), ಲೀಥುವೇನಿಯಾ, ಲಾಕ್ಸಂಬರ್ಗ್, ಮಾಕೋವಾ, ಮಾಲ್ಟ, ಮೈಕ್ರೋನೇಸಿಯಾ, ನೆದರ್ಲ್ಯಾಂಡ್, ನ್ಯೂಸಿಲ್ಯಾಂಡ್, ನಾರ್ವೆ, ಪಾಪ ನ್ಯೂಗಿನಿ, ಪ್ರಿನ್ಸಿಪಾಲಿಟಿ ಆಫ್ ಲಿಚ್ ಟೆನ್‌ಸ್ಟಿನ್ (ವದಸ್), ಪೋರ್ಚುಗಲ್, ರಿಪಬ್ಲಿಕ್ ಆಫ್ ಸಾಲ್ವೇನಿಯಾ, ರಿಪಬ್ಲಿಕ್ ಆಫ್ ಸಾನ್ಮೇರಿನೊ, ರೋಮೇನಿಯಾ, ಸ್ಪೇನ್, ಸ್ವೀಡನ್, ಸ್ವಿಡ್ಜರ್ಲ್ಯಾಂಡ್, ಟರ್ಕಿ, ಯು.ಕೆ. ಯು.ಎಸ್.ಎ. – ಇವುಗಳಲ್ಲಿ | 175 | 25 |
| | 75<br>ಆಫ್‌ಘಾನಿಸ್ತಾನ್, ಆಲ್‌ಬೇನಿಯಾ, ಆಲ್ಜೀರಿಯಾ, ಅಂಗೋಲ, ಆಂಗ್ವಿಲ್ಲ, ಆಂಟಿಗೂವ, ಅರ್ಜೆಂಟೈನಾ, ಅರ್‌ಮೇನಿಯಾ, ಅಜರ್ ಬೈಜಾನ್, ಆರೂಬಾ, ಭಾಮಾರ್‍ಸ್, ಬಹರಿನ್, ಬರ್‌ದಾದೋಸ್, ಬೆಲಾರಸ್, ಬರ್‌ಮುಡಾ, ಬೊಲ್‌ವಿಯಾ, ಬೊಟ್ಸ್‌ವಾನಾ, ಬೋಸ್‌ವಿಯಾ, ಹರಜ್‌ಗೋವಿನಾ, ಬ್ರಿಜಿಲ್, ಬಲ್‌ಗೇರಿಯಾ, ಚಿಲಿ, ಕೊಲಂಬಿಯಾ, ಕೋಸ್ಟಾರಿಕಾ, ಕ್ರೋಟಿಯಾ, ಕ್ಯೂಬಾ, ಜೆಚ್ ರಿಪಬ್ಲಿಕ್, ಡೊಮಿನಿಕಾ, ಡೊಮಿನಿಕನ್ ರಿಪಬ್ಲಿಕ್, ಈಕ್ವೆಡಾರ್, ಈಜಿಪ್ಟ್, ಎಲ್ ಸೆಲ್ವೆಡಾರ್, ಈಸ್ಟೋನಿಯಾ, ಫ್ರೆಂಚ್ ಗಲ್‌ನಿಯಾ, ಗಾಜಾ (ಪಿಎನ್‌ಎ), ಜಾರ್ಜಿಯಾ, ಗ್ರೆನಾಡಾ, ಗ್ಯೂಡಾಲೋಪ್, ಗೌಟೆಮಾಲಾ, ಗಯಾನಾ, ಹೈಟೆಲ್, ಹೊಂದುರಾಸ್, ಹಂಗೇರಿ, ಇಂಡೋನೇಶಿಯಾ, ಇರಾನ್, ಇರಾಖ್, ಇಸ್ರೇಲ್, ಜಮೈಕ, ಕಾಂಪೂಚಿಯಾ (ಕಾಂಬೋಡಿಯಾ), ಕಜಾಕಿಸ್ತಾನ್, ಕುವೈತ್, ಕಿರ್ಗಿಸ್ತಾನ್, ಲಾತ್‌ವಿಯಾ, ಮಲೇಶಿಯಾ, ಮಾರ್‌ಟನಿಕ್, ಮ್ಯಾಸಿಡೋನಿಯಾ, ಮೆಕ್ಸಿಕೋ, ಮಾಲ್‌ಡೋವಾ, ಮಾಂಟೆನಿಗ್ರೋ, ಮಾಂಟ್ಸೆರಾಂಟ್, ನಮೀಬಿಯಾ, ನೆದರ್‌ಲಾಂಡ್ಸ್ ಆಂಟಿಲಿಸ್, ನಿಕರಗೂವಾ, ಒಮಾನ್, ಪೆಸಿಫಿಕ್ ಐಲ್ಯಾಂಡ್ಸ್ (ಟ್ರಸ್ಟ್ ಟೆರ್ರಿಟೊರಿ), ಪನಾಮಾ, ಪರಗ್‌ವೆ, ಪ್ಯೂರ್‌ಟೆರಿಕೊ, ಪೆರು, ಫಿಲಿಪ್ಪೈನ್ಸ್, ಪೋಲ್ಯಾಂಡ್, ಕತಾರ್, ರಿಪಬ್ಲಿಕ್ ಆಫ್ ಪಾಲವ್, ಸೌಧಿ ಅರಬೀಯಾ, ಸೆರ್‌ಬಿಯಾ, ಸಿಶೆಲ್ಸ್, ಸಿಂಗಪೂರ್, ಸ್ಲೋವಾಕ್ ರಿಪಬ್ಲಿಕ್ ಆಫ್ ಸೌತ್ ಆಫ್ರಿಕಾ, ಸರ್ಲ್‌ನ್ಯಾಮ್, ಸಿರಿಯಾ, ತಜಿಕಿಸ್ತಾನ್, ಥೈಲ್ಯಾಂಡ್, ಟ್ರಿನಿಡ್ಯಾಡ್ ಮತ್ತು ಟೊಬಾಗೊ, ತುರ್ಕ್‌ಮೆನಿಸ್ತಾನ್, ಟಾರ್ಕ್ಸ್ ಮತ್ತು ಕಾಲ್‌ಕೋಸ್, ಯುಎಇ ರಷ್ಯನ್ ಫೆಡರೇಶನ್, ಯುಕ್ರೇನ್, ಉರುಗ್ವೆ, ಉಜ್ಬೇಕಿಸ್ತಾನ್, ವನುಸ್ತು, ವೆನಿಜುಲಾ, ಜಿಂಬಾಬ್ವೆ. | 175 | 25 |
| | 60<br>ಅಮೆರಿಕನ್ ಸಮೋಅ, ಬಾಂಗ್ಲಾದೇಶ್, ಬೇಲೀಜ್, ಭೂತಾನ್, ಬೆನಿನ್, ಬ್ರಿಟೀಶ್ ವರ್ಜಿನ್ ಐಲ್ಯಾಂಡ್ಸ್, ಬರ್‌ಕಿನೋ ಫಾಸೋ, ಬರುಂದಿ, ಕೆಮೆರೂನ್, ಕೇಪ್‌ವರ್ಡೆ ಐಲ್ಯಾಂಡ್ಸ್, ಕೇಮನ್ ಐಲ್ಯಾಂಡ್ಸ್, ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್, ಚಡ್, ಕುಮರೋಸ್, | 175 | 25 |

| | | | |
|---|---|---|---|
| | ಡಿ.ಆರ್.ಸಿ. (ಡೆಮೊಕ್ರಾಟಿಕ್ ರಿಪಬ್ಲಿಕ್ ಆಫ್ ಕಾಂಗೋ), ಕೋಕ್ಸ್ ಐಲ್ಯಾಂಡ್, ಡ್ಜಿಬೋಟಿ, ಎರ್ರಿರಾ, ಈಕ್ವಟೋರಿಯಲ್ ಗಿನಿಯಾ, ಇತಿಯೋಪಿಯಾ, ಗಬಾನ್, ಗ್ಯಾಂಬಿಯಾ, ಗಾನಾ, ಗೌರ್ನ್, ಗಿನಿಯಾ, ಗಿನಿಯಾ ಬಿಸಾವ್, ಐವರಿ ಕೋಸ್ಟ್, ಜೋರ್‌ಡನ್, ಕೆನ್ಯಾ, ಕಿರಿಬಾಟಿ, ಕೊರಿಯಾ (ಉತ್ತರ), ಲಾವೋಸ್, ಲೆಬೆನಾನ್, ಲೆಸ್‌ತೋ, ಲಿಬಿರಿಯಾ, ಲಿಬ್ಯಾ, ಮ್ಯಾಡಗಾಸ್ಕರ್, ಮಲಾವಿ, ಮಾಲ್ಡೀವ್ಸ್, ಮಾಲಿ, ಮಾರಿಟೇನಿಯಾ, ಮಾರಿಷಸ್, ಮೊನಾಕೋ, ಮಂಗೋಲಿಯಾ, ಮೊರಾಕೊ, ಮೊಜಾಂಬಿಕ್, ಮೈನ್‌ಮಾರ್, ನೌರು, ನೇಪಾಲ್, ನ್ಯೂಕೆಲಡೊನಿಯಾ, ನೈಗರ್, ನೈಜೀರಿಯಾ, ನ್ಯೂ ಪಾಕಿಸ್ತಾನ್, ರೀಯುನಿಯನ್, ರ್‍ವಾಂಡಾ, ಸಮೋಅ, ಸಾಲ್‌ಟೋವರ್ ಅಂಡ್ ಪ್ರಿನ್ಸಿಪ್, ಸೆನಿಗಲ್, ಸಿಯಾರ ಲಿಯೋನ್, ಸಾಲೊಮನ್ ಐಲ್ಯಾಂಡ್ಸ್, ಸಮೋಲಿಯಾ, ಶ್ರೀಲಂಕಾ, ಸೇಂಟ್‌ಕಿಟ್ಸ್ ಅಂಡ್ ನೆವೀಸ್, ಸೇಂಟ್ ಲೂಸಿಯಾ, ಸೇಂಟ್ ವಿನ್ಸೆಂಟ್ ಅಂಡ್ ಗ್ರೆನಾಡೈನ್ಸ್, ಸುಡಾನ್, ಸ್ವಾಜಿಲ್ಯಾಂಡ್, ಟ್ಯಾಂಜಿನಿಯಾ, ಟೊಗೋ, ಟೊಂಗಾ, ತುನೀಸಿಯಾ, ತುವಾಲು, ಉಗಾಂಡಾ, ಯುಎಸ್ ವರ್ಜಿನ್ ಐಲ್ಯಾಂಡ್ಸ್, ವಿಯತ್‌ನಾಮ್, ಯಮನ್, ವಾಲ್ಟ್ಸ್ ಫ್ಯೂಚೂನ್ ಐಲ್ಯಾಂಡ್ಸ್, ಝೈರ್, ಜಾಂಬಿಯಾ. | | |

3. ಅಧಿಕಾರಿಗಳು ತಮ್ಮ ವಿದೇಶ ಪ್ರಯಾಣದ ಅವಧಿಯಲ್ಲಿ ತುರ್ತು ಸರ್ಕಾರಿ ಕೆಲಸಕ್ಕಾಗಿ ಮಾಡಿದ ಐಎಸ್‌ಡಿ ಕರೆಗಳು/ಫ್ಯಾಕ್ಸ್ ಇವುಗಳಿಗೆ ತಗುಲಿದ ವಾಸ್ತವ ವೆಚ್ಚವನ್ನು ತುಂಬಿಕೊಡುವಂತೆ ಸಹ ಕೋರಬಹುದು.

4. ಪ್ರತಿನಿಯೋಜನೆಯ ಮೇಲೆ ಇರುವವರೂ ಸೇರಿದಂತೆ ಸರ್ಕಾರಿ ಅಧಿಕಾರಿಗಳು/ಸಾರ್ವಜನಿಕ ವಲಯದ ಉದ್ಯಮಗಳ ಅಧಿಕಾರಿಗಳು ಮಾಡುವ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರದ ಸೂಕ್ತ ಅನುಮೋದನೆ ಕೋರುವ ಬಗೆಗಿನ ಪ್ರಸ್ತುತ ಇರುವ ಕಾರ್ಯವಿಧಾನ ಮುಂದುವರಿಯುವುದು.

5. ಪದನಿಮಿತ್ತ ಸಾಮರ್ಥ್ಯದಲ್ಲಿ ಸೇವೆ ಸಲ್ಲಿಸುತ್ತಿರುವ ಸಾರ್ವಜನಿಕ ವಲಯದ ಉದ್ಯಮಗಳ ಮಂಡಳಿಗಳಲ್ಲಿರುವ ಸರ್ಕಾರಿ ಅಧಿಕಾರಿಗಳನ್ನು, ಈ ಆದೇಶದ ಉದ್ದೇಶಕ್ಕಾಗಿ ಸರ್ಕಾರಿ ನೌಕರರೆಂದು ಪರಿಗಣಿಸಲಾಗುವುದೇ ವಿನಃ ಸಾರ್ವಜನಿಕ ವಲಯದ ಉದ್ಯಮಗಳ ನೌಕರರೆಂದು ಅಲ್ಲ.

6. ನಿಯೋಗದ ಒಂದು ಭಾಗವಾಗಿ ಮಾನ್ಯ ಮುಖ್ಯ ಮಂತ್ರಿಗಳು ಅಥವಾ ಮಂತ್ರಿಗಳೊಂದಿಗೆ ಬರುವ ಸಾರ್ವಜನಿಕ ವಲಯದ ಉದ್ಯಮಗಳ ಮುಖ್ಯ ಕಾರ್ಯನಿರ್ವಾಹಕರು ಮಾನ್ಯ ಮುಖ್ಯ ಮಂತ್ರಿಗಳು ಅಥವಾ ಮಂತ್ರಿಗಳು ತಂಗುವ ಹೊಟೇಲ್‌ನಲ್ಲಿಯೇ ತಂಗಿದ್ದರೆ, ಹೊಟೇಲ್‌ನಲ್ಲಿಯ ಸ್ಥಳಾವಕಾಶಕ್ಕಾಗಿ ಅವರಿಗೆ ತಗಲಿದ ವಾಸ್ತವ ವೆಚ್ಚವನ್ನು ತುಂಬಿಕೊಡತಕ್ಕದ್ದು. ಮುಖ್ಯ ಕಾರ್ಯನಿರ್ವಾಹಕರು ಮಾನ್ಯ ಮುಖ್ಯ ಮಂತ್ರಿಗಳೊಂದಿಗೆ ಅಥವಾ ಮಂತ್ರಿಗಳಿಗೆ ಒದಗಿಸಲಾದ ಸ್ಥಳಾವಕಾಶದಂಥದೇ ಮಾದರಿಯ ಕೊಠಡಿಗಳಲ್ಲಿ ಉಳಿದುಕೊಳ್ಳುವುದಿಲ್ಲ ಎಂದು ಖಚಿತಪಡಿಸತಕ್ಕದ್ದು.

7. ಈ ಆದೇಶಗಳ ಜಾರಿಗೆ ಸಂಬಂಧಿಸಿದ ಮಾರ್ಗದರ್ಶನ ಸೂತ್ರಗಳನ್ನು ಈ ಆದೇಶಕ್ಕೆ ಅನುಬಂಧಿಸಲಾಗಿದೆ.

8. ಈ ಆದೇಶಗಳು ಕೂಡಲೇ ಜಾರಿಯಲ್ಲಿ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ,**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ.

(ಸೇವೆಗಳು–1)

## ಅನುಬಂಧ

**ರಾಜ್ಯ ಸರ್ಕಾರದ ಅಧಿಕಾರಿಗಳ ಮತ್ತು ಸಾರ್ವಜನಿಕ ವಲಯದ ಉದ್ಯಮಗಳ ನೌಕರರ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಆದೇಶ ಸಂಖ್ಯೆ : ಎಫ್‌ಡಿ 03 ಎಸ್‌ಆರ್‌ಎ 2011, ದಿನಾಂಕ 17–12–2011 ಕ್ಕೆ ಪೂರಕ ಮಾರ್ಗದರ್ಶನ ಸೂತ್ರಗಳು :–**

1. ಹೊಟೇಲ್‌ನಲ್ಲಿ ಸ್ಥಳಾವಕಾಶ ಒದಗಿಸಿದ ಬಗ್ಗೆ ತಗುಲಿದ ವಾಸ್ತವಿಕ ವೆಚ್ಚಕ್ಕೆ ಸಂಬಂಧಿಸಿದಂತೆ, ವೋಚರುಗಳನ್ನು ಹಾಜರುಪಡಿಸಿದ ಮೇಲೆ ಸರ್ಕಾರಿ ಆದೇಶದ ಅಡಿಯಲ್ಲಿ ನಿಗದಿಪಡಿಸಲಾದ ಮಿತಿಗಳಿಗೆ ಒಳಪಟ್ಟು ವಾಸ್ತವಿಕ ವೆಚ್ಚವನ್ನು ತುಂಬಿಕೊಡಲಾಗುವುದು.
2. ಅಧಿಕಾರಿಯು ತಂಗುವುದಕ್ಕೆ ತನ್ನದೇ ಆದ ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡಿದ್ದರೆ ಅಥವಾ ಅವನಿಗೆ ಉಚಿತ ಸ್ಥಳಾವಕಾಶ ಒದಗಿಸಿದ್ದರೆ, ಅವರು ದಿನಭತ್ಯೆ ಮಾತ್ರ ಪಡೆಯುತ್ತಾರೆಯೇ ವಿನಃ ಹೊಟೇಲು ಬಾಡಿಗೆ ಅಲ್ಲ.
3. ಮುಂಗಡಗಳನ್ನು ನಿಯಮಗಳಾನುಸಾರ ಪಡೆದುಕೊಳ್ಳಬಹುದು ಮತ್ತು ಹಿಂದಿರುಗಿ ಬಂದ ತರುವಾಯ ನಿಯತ ಪ್ರಯಾಣ ಭತ್ಯೆ ಬಿಲ್ಲುಗಳನ್ನು ಸಲ್ಲಿಸಬೇಕು.

4. ನೌಕರರನ್ನು ರಾಜ್ಯದ ಅತಿಥಿಯೆಂದು ಪರಿಗಣಿಸಲಾಗಿರುವಲ್ಲಿ ಮತ್ತು ಅವರಿಗೆ ಉಚಿತ ಊಟ ಮತ್ತು ವಸತಿಯನ್ನು ಒದಗಿಸಲಾಗಿರುವಲ್ಲಿ, ಅವರು, ಅಂಗೀಕಾರಾರ್ಹವಿರುವ ದಿನಭತ್ಯೆಯ ಶೇ. ಇಪ್ಪತ್ತೈದರಷ್ಟನ್ನು (ಶೇ.25) ಮಾತ್ರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
5. ಬಕ್ಷೀಸು (ಟಿಪ್ಸ್) ಎಂದು ಮಾಡಲಾದ ಯಾವುದೇ ವೆಚ್ಚವನ್ನು ತುಂಬಿಕೊಡಲಾಗುವುದಿಲ್ಲ.
6. ವಿಮಾನ ನಿಲ್ದಾಣ ತೆರಿಗೆಗಳು/ಸರ್ ಚಾರ್ಜ್‌ಗಳನ್ನು ಸಂದಾಯ ಮಾಡಿದ್ದರೆ, ಅಗತ್ಯ ವೋಚರುಗಳನ್ನು ಹಾಜರುಪಡಿಸಿದ ಮೇಲೆ ಸಂದಾಯ ಮಾಡಿರುವ ವಾಸ್ತವಿಕ ಹಣವನ್ನು ತುಂಬಿಕೊಡಲಾಗುವುದು.
7. ವ್ಯಾಪಾರ ನಿಯೋಗದ ಪ್ರವಾಸಗಳ ಸಂದರ್ಭಗಳಲ್ಲಿ, ಮನರಂಜನಾ ಮುಂಗಡವನ್ನು, ರಾಜ್ಯ ಸರ್ಕಾರದಿಂದ ಪಡೆದ ನಿರ್ದಿಷ್ಟ ಮಂಜೂರಾತಿಗೆ ಅನುಸಾರವಾಗಿ ನಿಯೋಗದ ಮುಖಂಡನಿಗೆ ಸಂದಾಯ ಮಾಡಲಾಗುವುದು. ಮಂಜೂರಾದ ಗರಿಷ್ಠ ಮನರಂಜನಾ ಮುಂಗಡವು, 1000 ಯುಎಸ್ ಡಾಲರ್‌ನ್ನು (ಒಂದು ಸಾವಿರ ಮಾತ್ರ) ಮೀರತಕ್ಕದ್ದಲ್ಲ ಮತ್ತು ಅದನ್ನು ಅಗತ್ಯ ವೋಚರುಗಳನ್ನು ಹಾಜರುಪಡಿಸಿದ ಮೇಲೆ ಹೊಂದಾಣಿಕೆ ಮಾಡಲಾಗುವುದು.
8. ಸ್ಥಳೀಯ ಚಲಾವಣೆ ಹಣವು ಸುಲಭವಾಗಿ ಪರಿವರ್ತನೆ ಮಾಡಬಹುದಾದ ದೇಶಗಳ ಸಂದರ್ಭದಲ್ಲಿ, ಯುಎಸ್ ಡಾಲರ್‌ನಲ್ಲಿರುವ ದಿನಭತ್ಯೆಯನ್ನು ಸ್ಥಳೀಯ ಚಲಾವಣೆ ಹಣದ ರೂಪದಲ್ಲಿ ಸಂದಾಯ ಮಾಡಬಹುದು. ಸ್ಥಳೀಯ ಚಲಾವಣೆ ಹಣಕ್ಕೆ ಸಮನಾದ ಹಣವನ್ನು, ಭಾರತ ಸರ್ಕಾರದ ಹಣಕಾಸು ಮಂತ್ರಾಲಯವು ಕಾಲಕಾಲಕ್ಕೆ ನಿಗದಿಪಡಿಸಬಹುದಾದ ಸರ್ಕಾರಿ ವಿನಿಮಯ ದರಗಳನ್ನು ಗಣನೆಗೆ ತೆಗೆದುಕೊಂಡು ರೂಪಾಯಿ ಮೌಲ್ಯವನ್ನು ನಿಗದಿಪಡಿಸುವುದು. ಸ್ಥಳೀಯ ಚಲಾವಣೆ ಹಣವು ಸುಲಭವಾಗಿ ಪರಿವರ್ತನೆ ಮಾಡಲಾಗದ ದೂತವರ್ಗಗಳ ಸಂಬಂಧದಲ್ಲಿ ನಿಗದಿಪಡಿಸಲಾದ ದಿನಭತ್ಯೆಯನ್ನು ಯುಎಸ್ ಡಾಲರುಗಳಲ್ಲಿ ಸಂದಾಯ ಮಾಡಲಾಗುವುದು.
9. ಭಾರತ ಸರ್ಕಾರದ ಕಾರ್ಯದರ್ಶಿಗಳು ಹಾಗೂ ಅದಕ್ಕೂ ಮೇಲ್ಪಟ್ಟ ದರ್ಜೆಯ ಮತ್ತು ಸಮಾನ ದರ್ಜೆಯ ಅಧಿಕಾರಿಗಳು ಫಸ್ಟ್ ಕ್ಲಾಸ್‌ನಲ್ಲಿ ಪ್ರಯಾಣಿಸಲು ಅರ್ಹರಿರುತ್ತಾರೆ. ಅಪರ ಕಾರ್ಯದರ್ಶಿಗಳು ಮತ್ತು ಜಂಟಿ ಕಾರ್ಯದರ್ಶಿಗಳು ಹಾಗೂ ಸಮಾನ ದರ್ಜೆಯ ಅಧಿಕಾರಿಗಳು ಬಿಸಿನೆಸ್ ಕ್ಲಾಸ್/ಕ್ಲಬ್ ಕ್ಲಾಸ್‌ನಲ್ಲಿ ಮತ್ತು ಉಳಿದ ಅಧಿಕಾರಿಗಳು ಎಕಾನಮಿ ಕ್ಲಾಸ್‌ನಲ್ಲಿ ಪ್ರಯಾಣಿಸಲು ಅರ್ಹರಿರುತ್ತಾರೆ.
10. ಏರ್ ಇಂಡಿಯಾ ವಿಮಾನ ಸಂಚರಿಸುವ ಕಡೆಗಳಲ್ಲೆಲ್ಲಾ, ವಿಮಾನ ಪ್ರಯಾಣವನ್ನು ಸಾಮಾನ್ಯವಾಗಿ, ಅದರಲ್ಲೇ ಮಾಡಬೇಕು. ಏರ್ ಇಂಡಿಯಾ ವಿಮಾನಗಳು ಸಂಚರಿಸದಿರುವ ಕಡೆಗಳಲ್ಲಿ ಅಥವಾ ನೌಕರರು ಗಮ್ಯ ಸ್ಥಾನವನ್ನು ಸಕಾಲಕ್ಕೆ ತಲುಪಲು ಸಾಧ್ಯವಾಗದಿರುವ ಕಡೆಗಳಲ್ಲಿ ಮಾತ್ರ ಇತರ ವಿಮಾನಗಳನ್ನು ಬಳಸಬಹುದು.

**ಕೆ.ಎಸ್. ಗೋಪಾಲಕೃಷ್ಣ,**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ.
(ಸೇವೆಗಳು–1)

ಪಿ.ಆರ್. 76

## ಸಹಕಾರ ಸಚಿವಾಲಯ

**ವಿಷಯ :** ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿ ಒ 77 ಎಲ್ ಎಂ 2011, ದಿನಾಂಕ 25.05.2011
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–ಮನವಿ:58:2006–07 ದಿನಾಂಕ: 28.1.2011.

**ಪ್ರಸ್ತಾವನೆ :**

ಅಮಾನತ್ ಸಹಕಾರ ಬ್ಯಾಂಕ್ ನಿ. ಬೆಂಗಳೂರು, ಇದರ ಆಡಳಿತಗಾರರ ಅವಧಿಯನ್ನು ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 30.09.2011ರವರೆಗೆ ವಿಸ್ತರಿಸಿದ್ದು, ಸಹಕಾರ ಸಂಘಗಳ ನಿಬಂಧಕರು, ಮೇಲೆ ಓದಲಾದ (2) ರ ಪತ್ರದಲ್ಲಿ ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ: 01.10.2011ರಿಂದ ಆರು ತಿಂಗಳ ಅವಧಿಗೆ ಅಥವಾ ಚುನಾವಣೆ ನಡೆದು ಹೊಸ ಆಡಳಿತ ಮಂಡಳಿ ಅಧಿಕಾರ ವಹಿಸಿಕೊಳ್ಳುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲು ಕೋರಿರುತ್ತಾರೆ. ಮಾನ್ಯ ಸಹಕಾರ ಹಾಗೂ ಕೃಷಿ ಮಾರುಕಟ್ಟೆ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 20.10.2011ರಂದು ಮೇಲ್ಕಂಡ ಬ್ಯಾಂಕಿನ ಪ್ರಗತಿಯನ್ನು ಪರಿಶೀಲಿಸಿ ಈಗಿರುವ ಬ್ಯಾಂಕಿನ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸುವ ದೃಷ್ಟಿಯಿಂದ ಆಡಳಿತಗಾರರ ಅವಧಿಯನ್ನು ಆರು ತಿಂಗಳ ಅವಧಿಗೆ ವಿಸ್ತರಿಸಲು ನಿರ್ಣಯಿಸಲಾಗಿದೆ. ಕ.ಸ.ಸ. ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರಕರಣ 30 ಉಪಪ್ರಕರಣ(1)ಕ್ಕೆ ಮಾರ್ಪಾಡು ಮಾಡಿ ಆಡಳಿತಗಾರರ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವಿಸ್ತರಿಸಲು ತೀರ್ಮಾನಿಸಿ ಹಾಗೂ ನಿಬಂಧಕರು ಮೇಲ್ಕಂಡ ಪ್ರಸ್ತಾವನೆಗೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 194 ಸಿಎಲ್‌ಎಂ 2011, ಬೆಂಗಳೂರು, ದಿನಾಂಕ: 20–12–2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 01.10.2011 ರಿಂದ 31.03.2012 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಐವತ್ತೆಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.03.2012 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪಿ.ಆರ್. 77

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಇ 107.ಸಂಮಾಸ.2011, ದಿನಾಂಕ 23–08–2011.

2) ಸಹಕಾರ ಸಂಘಗಳ ನಿಬಂಧಕರವರ ಪತ್ರ ಸಂಖ್ಯೆ: RCS-ADM-3-114-ASP-2009-10, ದಿನಾಂಕ: 18.11.2011.

**ಪ್ರಸ್ತಾವನೆ :**

ಮೇಲೆ 2 ರಲ್ಲಿನ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರವರು, ಸರ್ಕಾರದ ಆದೇಶ ಸಂಖ್ಯೆ ಸಇ 107 ಸಂಮಾಸ 2011, ದಿನಾಂಕ: 23.08.2011 ರನ್ವಯ 17 ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿರುವ ಮೊತ್ತ ರೂ. 50.000 ರಿಂದ 3.00 ಲಕ್ಷಗಳವರೆಗೆ ವಿವಿಧ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆ. ಆದರೆ ಯಾವುದೇ ಒಂದು ಯೋಜನೆ ಅಲ್ಪ ಅನುದಾನದಿಂದ ಪೂರ್ಣಗೊಂಡಂತಾಗುವುದಿಲ್ಲ. ಆದ್ದರಿಂದ ಸದರಿ ಆದೇಶವನ್ನು ರದ್ದುಪಡಿಸಿ, ಇದರ ಬದಲಾಗಿ, ಒಟ್ಟು 21 ಲ್ಯಾಂಪ್ಸ್ ಸಹಕಾರ ಸಂಘಗಳ ಪೈಕಿ 6 ರಿಂದ 7 ಲ್ಯಾಂಪ್ಸ್ ಸಂಘಗಳಲ್ಲಿ ಇದುವರೆವಿಗೂ ಸ್ವತಃ ಗೋದಾಮ, ಕಛೇರಿ ಕಟ್ಟಡ, ವ್ಯಾಪಾರ ಮಳಿಗೆ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಹೊಂದಿರುವುದಿಲ್ಲ, ಆದ್ದರಿಂದ ಇವುಗಳ ಪೈಕಿ,

1) ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಹಳಿಯಾಳ ಇದಕ್ಕೆ ಗಣಕಯಂತ್ರ ಖರಿದೀಸಲು, ಉಗ್ರಾಣ ಕಛೇರಿ ಕಟ್ಟಡಕ್ಕಾಗಿ ರೂ. 7.00 ಲಕ್ಷಗಳನ್ನು ಹಾಗೂ,

2) ಬಂಟವಾಳ ತಾಲ್ಲೂಕ ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಲ್ಯಾಂಪ್ಸ್ ಬಂಟವಾಳ ದಕ್ಷಿಣ ಕನ್ನಡ ಜಿಲ್ಲೆ ವಿಟ್ಲಶಾಖೆ ಇದಕ್ಕೆ ಅಡಿಕೆ ಹಾಳೆ ದಾಸ್ತಾನು ಮಳಿಗೆ ಮತ್ತು ಮಾರಾಟ ಮಳಿಗೆಯನ್ನು ನಿರ್ಮಿಸಲು ರೂ. 5.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಸಇ 165 ಸಂಮಾಸ 2011, ಬೆಂಗಳೂರು, ದಿನಾಂಕ: 27.12.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಇ.107.ಸಂಮಾಸ.2011, ದಿನಾಂಕ: 23.08.2011ನ್ನು ಈ ತಕ್ಷಣದಿಂದ ರದ್ದುಗೊಳಿಸಿ, ಈ ಕೆಳಗಿನಂತೆ ಪರಿಷ್ಕೃತ ಆದೇಶ ಹೊರಡಿಸಿದೆ.

1) ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಹಳಿಯಾಳ ಇದಕ್ಕೆ ಗಣಕಯಂತ್ರ ಖರಿದೀಸಲು, ಉಗ್ರಾಣ ಮತ್ತು ಕಛೇರಿ ಕಟ್ಟಡಕ್ಕಾಗಿ ರೂ. 7.00 ಲಕ್ಷಗಳನ್ನು ಹಾಗೂ,

2) ಬಂಟವಾಳ ತಾಲ್ಲೂಕ ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘಗಳ ನಿಬಂಧಕರು, ಲ್ಯಾಂಪ್ಸ್ ಬಂಟವಾಳ ದಕ್ಷಿಣ ಕನ್ನಡ ಜಿಲ್ಲೆ ವಿಟ್ಲಶಾಖೆ ಇದಕ್ಕೆ ಅಡಿಕೆ ಹಾಳೆ ದಾಸ್ತಾನು ಮಳಿಗೆ ಮತ್ತು ಮಾರಾಟ ಮಳಿಗೆಯನ್ನು ನಿರ್ಮಿಸಲು ರೂ. 5.00 ಲಕ್ಷಗಳನ್ನು (ಐದು ಲಕ್ಷ ರೂಪಾಯಿಗಳು ಮಾತ್ರ) ಅಂದರೆ ಒಟ್ಟು ರೂ. 12.00 ಲಕ್ಷಗಳು (ಹನ್ನೆರಡು ಲಕ್ಷ ರೂಪಾಯಿಗಳು ಮಾತ್ರ) ಈ ಅನುದಾನವನ್ನು 2011–12ನೇ ಸಾಲಿನ 423 ಗಿರಿಜನ ಉಪಯೋಜನೆ ಲೆಕ್ಕಶೀರ್ಷಿಕೆ 2425.00–108–0–39 ರಡಿಯಲ್ಲಿ ಈ ಕೆಳಕಂಡ ಷರತ್ತುಗಳೊಂದಿಗೆ ಬಿಡುಗಡೆ ಮಾಡಿದೆ.

1) ಈ ಅನುದಾನ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕಶೀರ್ಷಿಕೆ 2425–00–108–0–39–423 ಗಿರಿಜನ ಉಪಯೋಜನೆ ಇದರ ಅಡಿಯಲ್ಲಿ ಭರಿಸತಕ್ಕದ್ದು.

2) ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ, ಮೈಸೂರು, ಇದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು 2000ನ್ನು ಪಾಲಿಸತಕ್ಕದ್ದು.

3) ಸಹಕಾರ ಸಂಘಗಳ ನಿಬಂಧಕರವರು ಮಹಾಮಂಡಳವು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು, ಮತ್ತು ಅನುದಾನದ ವಿನಿಯೋಗದ ಬಗ್ಗೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಬಿಡುಗಡೆ ಮಾಡಿದ ಅನುದಾನ ರೂ. 12.00 ಲಕ್ಷಗಳನ್ನು (ಹನ್ನೆರಡು ಲಕ್ಷ ರೂಪಾಯಿಗಳು ಮಾತ್ರ) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಮಹಾಮಂಡಳದಿಂದ ಸ್ವೀಕೃತಿಯಲ್ಲಿ ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲಾ ಇವರಿಗೆ ಅಧಿಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 78

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು, ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಕಾರಣ ಕೇಳುವ ನೋಟೀಸ್ ದಿನಾಂಕ: 24–8–2011.
2. ಸರ್ಕಾರದ ಪತ್ರ ಸಂಖ್ಯೆ: ಸಇ/97/ಸಸಂನೊ/2011 ದಿ: 16–9–2011.
3. ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು, ಇವರು ಕಾರಣ ಕೇಳುವ ನೋಟಿಸಿಗೆ ದಿ: 28/9/2011 ರಂದು ನೀಡಿರುವ ಉತ್ತರ.
4. ಸಹಕಾರ ಸಂಘಗಳ ಉಪನಿಬಂಧಕರು ಹಾಗೂ ಸಂಘಗಳ ಜಿಲ್ಲಾ ನೋಂದಣಾಧಿಕಾರಿ ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ, ಇವರು ಪ್ರಧಾನ ಕಾರ್ಯದರ್ಶಿ, ಅಖಿಲ ಭಾರತ ವೀರಶೈವ ಮಹಾಸಭಾ, ಬೆಂಗಳೂರು, ಇವರಿಗೆ ಬರೆದ ಪತ್ರ ದಿನಾಂಕ: 14/10/2011.
5. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:45046/11 ಮತ್ತು 45103/2011 ದಿನಾಂಕ: 7/12/2011ರ ಮಧ್ಯಂತರ ಆದೇಶ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸಿನಲ್ಲಿ ಸಂಘದ ಕಾರ್ಯಕಾರಿ ಸಮಿತಿಯ ಅವಧಿಯು ದಿನಾಂಕ: 31.03.2011ಕ್ಕೆ ಮುಕ್ತಾಯವಾಗಿರುವುದಾಗಿ ತಿಳಿಸಿ, ಸದರಿ ಕಾರ್ಯಕಾರಿ ಸಮಿತಿಯನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ನಿಮ್ಮ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರನ್ವಯ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ನಿಮ್ಮ ಲಿಖಿತ/ಮೌಖಿಕ ಹೇಳಿಕೆಯನ್ನು ಈ ಸೂಚನಾ ಪತ್ರ ತಲುಪಿದ 15 ದಿವಸದೊಳಗಾಗಿ ಸಲ್ಲಿಸುವಂತೆ, ಇಲ್ಲವಾದಲ್ಲಿ ನಿಮ್ಮ ಹೇಳಿಕೆ ಏನು ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಜರುಗಿಸಲಾಗುವುದೆಂದು ಸಂಸ್ಥೆಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರಿಗೆ ನೋಟಿಸ್ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಮಹಾಸಭೆಯ ಚುನಾವಣೆಯನ್ನು ನಿಗದಿತ ಅವಧಿಯೊಳಗೆ ನಡೆಸಲು ಸೂಕ್ತ ಕ್ರಮ ಕೈಗೊಳ್ಳಲು ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು, ಇವರಿಗೆ ತಿಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು, ಇವರು ಕಾರಣ ಕೇಳುವ ನೋಟಿಸಿಗೆ ಉತ್ತರ ನೀಡಿ ಸದರಿ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಅವಧಿಯು ದಿನಾಂಕ: 30–3–2011ಕ್ಕೆ ಮುಕ್ತಾಯವಾಗದೇ ದಿನಾಂಕ: 25–12–2011ರಂದು ಮುಕ್ತಾಯವಾಗಲಿರುವುದಾಗಿ ತಿಳಿಸಿದ್ದಾರೆ. ಈ ಅಂಶವನ್ನು ಸರ್ಕಾರ ಗಮನಿಸಿದೆ.

ಮೇಲೆ (4)ರಲ್ಲಿ ಓದಲಾದ ಸಹಕಾರ ಸಂಘಗಳ ಉಪನಿಬಂಧಕರು ಹಾಗೂ ಸಂಘಗಳ ಜಿಲ್ಲಾ ನೋಂದಣಾಧಿಕಾರಿಯವರ ಪತ್ರದಲ್ಲಿ ಈ ಸಂಸ್ಥೆಯ ವಿಚಾರಣಾ ವರದಿಯನ್ನು ಪ್ರಧಾನ ಕಾರ್ಯದರ್ಶಿ ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು ಇವರಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 25 (2)(iii) ರಂತೆ ಸಂಘಕ್ಕೆ ಕಳುಹಿಸಲಾಗಿದೆ.

ಮೇಲೆ (5) ರಲ್ಲಿ ಓದಲಾದ ಘನ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಬಂಧ ನ್ಯಾಯಾಲಯವು ಚುನಾವಣಾ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲು ಮಧ್ಯಂತರ ತಡೆಯಾಜ್ಞೆ ನೀಡಿದೆ. ರಿಟ್ ಅರ್ಜಿಯಲ್ಲಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಕುರಿತು ಇನ್ನೂ ವಿಚಾರಣೆಯಲ್ಲಿದ್ದು, ಈ ಪ್ರಕರಣವನ್ನು ದಿನಾಂಕ: 5–1–2012ಕ್ಕೆ ಮುಂದೂಡಿದೆ. ಆದರೆ, ಘನ ಉಚ್ಚ ನ್ಯಾಯಾಲಯವು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಕುರಿತು ಯಾವುದೇ ತಡೆಯಾಜ್ಞೆಯಾಗಲಿ, ಅಥವಾ ನಿರ್ದೇಶನವನ್ನಾಗಲಿ ನೀಡಿರುವುದಿಲ್ಲ.

ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು ಇವರ ದಿನಾಂಕ: 30–11–2011 ರ ಪತ್ರದಲ್ಲಿ ಆಡಳಿತ ಮಂಡಳಿಯ ಅವಧಿಯು ದಿನಾಂಕ: 25–12–2011ರವರೆಗೆ ಮುಂದುವರೆಯಲಿದ್ದು ಇದನ್ನು ದಿನಾಂಕ: 26–12–2011 ರಿಂದ ದಿನಾಂಕ: 14–04–2012 ರವರೆಗೆ ಮುಂದುವರೆಸಲು ಕೋರಿರುತ್ತಾರೆ. ಈ ಅವಧಿ ವಿಸ್ತರಣೆ ಬಗ್ಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯನ್ವಯ ಅವಕಾಶವಿರುವುದು ಕಂಡುಬರುವುದಿಲ್ಲ. ಆದ್ದರಿಂದ ದಿನಾಂಕ: 26–12–2011ರಿಂದ ಸಂಘದ ಹಾಲಿ ಆಡಳಿತ ಮಂಡಳಿಯು ಮುಂದುವರೆಯಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಸಂಘದ ಆಡಳಿತ ವ್ಯವಸ್ಥೆಯಲ್ಲಿ ಶೂನ್ಯ ಪರಿಸ್ಥಿತಿ ಉಂಟಾಗುವುದರಿಂದ ಅನಿವಾರ್ಯವಾಗಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಬೇಕೆಂಬುದನ್ನು ಸರ್ಕಾರವು ಮನಗಂಡಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ. ಸಇ 97 ಸಸಂನೋ 2011, ಬೆಂಗಳೂರು, ದಿನಾಂಕ: 24–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ(1)(ಬಿ) ರನ್ವಯ ಅಖಿಲ ಭಾರತ ವೀರಶೈವ ಮಹಾಸಭಾ (ರಿ), ಬೆಂಗಳೂರು, ಈ ಸಂಘದ ಆಡಳಿತ ಮಂಡಳಿ ಅವಧಿಯು ದಿನಾಂಕ: 25.12.2011ಕ್ಕೆ ಮುಕ್ತಾಯವಾಗಿ, ಹೊಸ ಆಡಳಿತ ಮಂಡಳಿಯು ಅಸ್ತಿತ್ವಕ್ಕೆ ಬರುವುದಿಲ್ಲವಾದ್ದರಿಂದ ಸದರಿ ಕಾಯ್ದೆಯ ಕಲಂ 27–ಎ(1)(ಸಿ) ರನ್ವಯ ಅಖಿಲ ಭಾರತ ವೀರ ಶೈವ ಮಹಾಸಭಾ(ರಿ) ಬೆಂಗಳೂರು, ಈ ಸಂಘಕ್ಕೆ ದಿನಾಂಕ: 26–12–2011 ರಿಂದ ಜಾರಿಗೆ ಬರುವಂತೆ ಆರು (06) ತಿಂಗಳ ಅವಧಿಗೆ ಡಾ॥ ಶ್ರೀ ಸಿ. ಸೋಮಶೇಖರ್ ಐ.ಎ.ಎಸ್., ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ, ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಆರು (06) ತಿಂಗಳ ಅವಧಿಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 79

**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಹೊಸದಾಗಿ ರಚನೆಗೊಂಡಿರುವ ತೀರ್ಥಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 209 ಎಂಆರ್‌ಇ (1) 2009 ದಿನಾಂಕ: 06/12/2010.

2) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/194/ನಿಯವಿ/2010 ದಿನಾಂಕ: 29/06/2010.

3) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/370/ಸಿಬ್ಬಂದಿ-1(ಸಿ)/2010 ದಿನಾಂಕ: 18/12/2010.

**ಪ್ರಸ್ತಾವನೆ :**

ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ವಿಭಜಿಸಿ ತೀರ್ಥಹಳ್ಳಿ ತಾಲ್ಲೂಕಿಗೆ ಪ್ರತ್ಯೇಕ ಮಾರುಕಟ್ಟೆ ಕ್ಷೇತ್ರವನ್ನು ಸ್ಥಾಪಿಸಲಾಗಿತ್ತು.

ಕೃಷಿ ಮಾರಾಟ ನಿರ್ದೇಶಕರು, ಮೇಲೆ (2) & (3) ರಲ್ಲಿ ಓದಲಾದ ತಮ್ಮ ಪತ್ರಗಳಲ್ಲಿ ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿನ ವಿವಿಧ ವೃಂದಗಳಿಗೆ ಸೇರಿದ ಹುದ್ದೆಗಳ ಪೈಕಿ ಈ ಕೆಳಕಂಡ 09 ಹುದ್ದೆಗಳನ್ನು ತೀರ್ಥಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸ್ಥಳಾಂತರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಸೃಜಿಸಲಾದ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಕಾರ್ಯದರ್ಶಿ | 01 |
| 02 | ಲೆಕ್ಕಿಗರು, ದರ್ಜೆ-2 | 01 |
| 03 | ಮಾರುಕಟ್ಟೆ ಸಹಾಯಕರು | 03 |
| 04 | ಬೆರಳಚ್ಚುಗಾರರು | 01 |
| 06 | ಮಾರುಕಟ್ಟೆ ಮೇಲ್ವಿಚಾರಕ, ದರ್ಜೆ-4 | 01 |
| 07 | ವಾಹನ ಚಾಲಕರು | 01 |
| 08 | ಸಿಪಾಯಿ | 01 |
| **ಒಟ್ಟು** | | **09** |

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಪೈಕಿ 09 ಹುದ್ದೆಗಳನ್ನು ತೀರ್ಥಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮರು ಹೊಂದಾಣಿಕೆ ಮೂಲಕ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 293 ಮಾಇಸೇ 2010, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್, 2011**

ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾಗಿರುವ ವಿವಿಧ ವೃಂದಗಳಿಗೆ ಸೇರಿದ ಒಟ್ಟು ಹುದ್ದೆಗಳ ಪೈಕಿ ಈ ಕೆಳಕಂಡ 09 ಹುದ್ದೆಗಳನ್ನು ತೀರ್ಥಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರು ಹೊಂದಾಣಿಕೆ ಮೂಲಕ ಸ್ಥಳಾಂತರಿಸಿ ಆದೇಶಿಸಿದೆ.

| ಕ್ರ.ಸಂ. | ಸೃಜಿಸಲಾದ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಕಾರ್ಯದರ್ಶಿ | 01 |
| 02 | ಲೆಕ್ಕಿಗರು, ದರ್ಜೆ-2 | 01 |
| 03 | ಮಾರುಕಟ್ಟೆ ಸಹಾಯಕರು | 03 |
| 04 | ಬೆರಳಚ್ಚುಗಾರರು | 01 |
| 06 | ಮಾರುಕಟ್ಟೆ ಮೇಲ್ವಿಚಾರಕ, ದರ್ಜೆ-4 | 01 |
| 07 | ವಾಹನ ಚಾಲಕರು | 01 |
| 08 | ಸಿಪಾಯಿ | 01 |
| **ಒಟ್ಟು** | | **09** |

ಈ ಹುದ್ದೆಗಳಿಗೆ ತಗಲುವ ವೆಚ್ಚವನ್ನು "3475-00-107-1-02" ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 1996 ದಿನಾಂಕ: 10/07/1996 ರಲ್ಲಿನ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾಗಿರುವ ಅಧಿಕಾರದ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 80

**ಸಿ.ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2011–12ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಶೀರ್ಷಿಕೆಯಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಕ್ಕೆ ನಿಗದಿಪಡಿಸಿರುವ ರೂ. 50.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರವರ ಪತ್ರ ಸಂಖ್ಯೆ: ಅನಿ–ಕೈಸಸಂ–2–105–ಅಪ್ರ–2011–12, ದಿನಾಂಕ: 26–09–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರವರು ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳವು ಪ್ರಾರಂಭವಾದಾಗಿನಿಂದಲೂ ರಾಜ್ಯದ ಸಹಕಾರ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾದ ಸಹಕಾರ ತರಬೇತಿ ಮತ್ತು ಶಿಕ್ಷಣ ಪ್ರಚಾರ ಮತ್ತು ಪ್ರಸಿದ್ಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿದೆ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಎಂ.ಓ.ಯು ಗೆ ಸಹಿ ಮಾಡಿರುವುದರಿಂದ ಹಾಗೂ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 57(2–ಎ)ಕ್ಕೆ ತಿದ್ದುಪಡಿ ಜಾರಿಯಾದಲ್ಲಿ ಶೇಕಡಾ 2ರಷ್ಟು ಸಹಕಾರ ಶಿಕ್ಷಣ ನಿಧಿಯನ್ನು ಸಹಕಾರ ಮಹಾಮಂಡಳಕ್ಕೆ ಹಂಚಿಕೆ ಮಾಡದೇ ಇರುವ ಸಾಧ್ಯತೆ ಇರುವುದರಿಂದ, ಕೃಷಿ ಪತ್ತಿನ ಕ್ಷೇತ್ರದಿಂದ ಸಂಗ್ರಹವಾಗುತ್ತಿದ್ದ ಸುಮಾರು ರೂ. 1.61 ಕೋಟಿ ಸಹಕಾರ ಶಿಕ್ಷಣ ನಿಧಿ ಕೊರತೆ ಉಂಟಾಗುತ್ತದೆಂದೂ, ಈ ರೂ. 1.61 ಕೋಟಿಗಳ ಕೊರತೆಯನ್ನು ತುಂಬಲು ಸಹಾಯಧನ ಮಂಜೂರು ಮಾಡುವುದು ಸೂಕ್ತವಾಗಿರುವುದರಿಂದ, ಸಹಕಾರ ತರಬೇತಿ ಮತ್ತು ಶಿಕ್ಷಣ ಶೀರ್ಷಿಕೆಯಡಿಯಲ್ಲಿ 2011–12ನೇ ಸಾಲಿನ ಆಯ–ವ್ಯಯದಲ್ಲಿ ಒದಗಿಸಲಾಗಿರುವ ರೂ. 75.00 ಲಕ್ಷಗಳ ಅನುದಾನವನ್ನು ಲೆಕ್ಕಶೀರ್ಷಿಕೆ 2425–00–003–0–02–101ರಡಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಕ್ಕೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 23 ಸಂಮಾಸ 2011, ಬೆಂಗಳೂರು, ದಿನಾಂಕ: 16.12.2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ 2011–12ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಲೆಕ್ಕಶೀರ್ಷಿಕೆ 2425–00–003–0–02 ಸಹಕಾರ ಮಹಾಮಂಡಳ ತರಬೇತಿ ಮತ್ತು ಶಿಕ್ಷಣ ಕಾರ್ಯಕ್ರಮಗಳು–101–ಗ್ರಾಂಟ್ಸ್ ಎನ್ ಎಡ್ (ಯೋಜನೇತರ) ಅಡಿಯಲ್ಲಿ ರೂ. 50.00 ಲಕ್ಷಗಳನ್ನು (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಕರ್ನಾಟಕ ರಾಜ್ಯ ಸಹಕಾರ ಮಹಾ ಮಂಡಳ ನಿ.,ಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ಡ್ರಾ ಮಾಡುವ ಹಣ ಸಂದಾಯ ರಸೀದಿಯಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರ ಸಹಿ ಮತ್ತು ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ಮೇಲು ಸಹಿ ಪಡೆದು ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: FD-1-TFP-2011. Dated: 28.09.2011 ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಇ 153 ಆಂಆಸ 2011 ದಿನಾಂಕ: 18.11.2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 81

**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ RIDF-XVII ರಡಿ ಅನುಮೋದನೆಗೊಂಡಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** **1**. ದಿನಾಂಕ: 07.12.2011ರ ನಬಾರ್ಡ್ ಸಂಸ್ಥೆಯ ಪತ್ರಸಂಖ್ಯೆ: NB/SPD/1711/RIDF-XVII/(*Karnataka RO*)/120 PSC/2011-12.

2. ದಿನಾಂಕ: 16.12.2011ರ ನಬಾರ್ಡ್ ಸಂಸ್ಥೆಯ ಪತ್ರಸಂಖ್ಯೆ: NB/KA/1839/RIDF-05/2011-12.

**ಪ್ರಸ್ತಾವನೆ :**

2011–12ನೇ ಸಾಲಿನಲ್ಲಿ ಆರ್.ಐ.ಡಿ.ಎಫ್.–XVII ರಡಿಯಲ್ಲಿ, ನಬಾರ್ಡ್‌ನಿಂದ ಸಾಲ ಪಡೆಯಲು ಹಾಗೂ ಯೋಜನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪಸಮಿತಿಯಿಂದ ಅನುಮೋದನೆ ಪಡೆದು ಸಣ್ಣ ನೀರಾವರಿ ಇಲಾಖೆಗೆ ನೀಡಲಾದ ರೂ. 120.00 ಕೋಟಿ Sectoral Allocation ಮೊತ್ತಕ್ಕೆ ಎದುರಾಗಿ ಸಣ್ಣ ನೀರಾವರಿ ಕಾಮಗಾರಿಗಳಿಗೆ, ಸಾಲ ಮಂಜೂರಾತಿ ನೀಡುವಂತೆ, ಅನುಮೋದಿತ ಕಾಮಗಾರಿಗಳ ಪಟ್ಟಿಯನ್ನು ಆರ್ಥಿಕ ಇಲಾಖೆಯಿಂದ ನಬಾರ್ಡ್ ಸಂಸ್ಥೆಗೆ ಕಳುಹಿಸಲಾಗಿದೆ.

ಅದರಂತೆ ಈ ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಗಳನ್ನು ತಯಾರಿಸಿ ಆರ.ಐ.ಡಿ.ಎಫ್.– XVII ರಡಿ ಸಾಲ ಸೌಲಭ್ಯ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ನಬಾರ್ಡ್ ಸಂಸ್ಥೆಗೆ ಹಂತ ಹಂತವಾಗಿ ಕಳುಹಿಸಲಾಗುತ್ತಿದೆ. ಈ ಪೈಕಿ ನಬಾರ್ಡ್ ಸಂಸ್ಥೆಯು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಆರ್.ಐ.ಡಿ.ಎಫ್–17ರ ಅಡಿಯಲ್ಲಿ ಒಟ್ಟು ರೂ. 2704.50 ಲಕ್ಷ ಅಂದಾಜು ಮೊತ್ತದ 38 ಕಾಮಗಾರಿಗಳ ಅಂದಾಜುಗಳಿಗೆ ಒಟ್ಟು ರೂ. 2569.28 ಲಕ್ಷ ಸಾಲ ಸೌಲಭ್ಯವನ್ನು ಮಂಜೂರು ಮಾಡಿದೆ.

ಈ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

**ಸರ್ಕಾರದ ಆದೇಶ ಸಂ. ಸನೀಇ 03 ನಯೋಕಾ 2011, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2011–12ನೇ ಸಾಲಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.– XVII ರಡಿ ಅನುಬಂಧ (1) ರಲ್ಲಿರುವ ಒಟ್ಟು ರೂ. 2569.28 ಲಕ್ಷ ಸಾಲ ಮಂಜೂರಾತಿ ದೊರಕಿರುವ ರೂ. 2704.50 ಲಕ್ಷ (ಇಪ್ಪತ್ತೇಳು ಕೋಟಿ ನಾಲ್ಕು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಅಂದಾಜು ಮೊತ್ತದ 38 ಕಾಮಗಾರಿಗಳ ಅಂದಾಜುಗಳಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ತಾಂತ್ರಿಕ ಮಂಜೂರಾತಿಯನ್ನು ಸೂಕ್ತವಾದ ಲೆಕ್ಕಶೀರ್ಷಿಕೆ/ಉಪ ಲೆಕ್ಕಶೀರ್ಷಿಕೆಯಡಿ ನೀಡುವುದು. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಅಥವಾ ಮುಖ್ಯ ಇಂಜಿನಿಯರ್‌ಗಳ ನೇತೃತ್ವದಲ್ಲಿ ಇರುವ ತಾಂತ್ರಿಕ ಸಮಿತಿಯ ತೀರುವಳಿಯನ್ನು ನಿಯಮಾನುಸಾರ ಪಡೆಯುವುದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ಕಾವೇರಿ ಕೊಳ್ಳದಲ್ಲಿ ಬರುವ ಯೋಜನೆಗಳ ಅನುಷ್ಠಾನವು ಕಾವೇರಿ ನ್ಯಾಯಾಧಿಕರಣದ ಆದೇಶಗಳಿಗೆ ವ್ಯತಿರಿಕ್ತವಾಗಬಾರದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## Schedule I

## Financial Details and Phasing of MI Projects- RIDF XVII - (WRD-MI)

## State: Karnataka

(Rs. Lakh)

| RO Code | Sl. No. | Name of the Projects | District | Taluk | Irrign. Potential CCA (ha) | Updated Project Cost | Expn. Upto 31-03-11 | Cost of In eligible items | Balance Eligible Cost | RIDF XVI loan 2012-13 | RIDF XVI loan 2013-14 | RIDF XVI loan Total | State Govt. Contn. |
|---|---|---|---|---|---|---|---|---|---|---|---|---|---|
| I17310 | 1 | Construction of Barrage cum Bridge across ingalagi nala near Herur, Hunagund Taluk | Bagalkot | BCB | 80.00 | 200.00 | 0.00 | 0.00 | 200.00 | 95.00 | 95.00 | 190.00 | 10.00 |
| I17297 | 2 | Construction of Bandhara across nala near Kannolli in Jamakhandl Taluk | Bagalkot | BCB | 40.00 | 37.00 | 0.00 | 0..00 | 37.00 | 17.58 | 17.58 | 35.15 | 1.85 |
| I17291 | 3 | Construction of Barrage cum Bridge near | Bagalkot | BCB | 45.00 | 111.00 | 0.00 | 0.00 | 111.00 | 52.73 | 52.73 | 105.45 | 5.55 |

| | | | | | | | | | | | | | |
|---|---|---|---|---|---|---|---|---|---|---|---|---|---|
| | | Mrysgud village Mudhol Taluk | | | | | | | | | | | |
| I17293 | 4 | Construction of Barrage cum Bridge near Kasabajambagi-Muddapur Mudhol Taluk | Bagalkot | BCB | 45.00 | 100.00 | 0.00 | 0.00 | 100.00 | 47.50 | 47.50 | 95.00 | 5.00 |
| I17294 | 5 | Flood Protection to Ghataprabha River near Soragaon village Mudhol Taluk | Bagalkot | FPW | 12.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17296 | 6 | Construction of Barrage (Bandara) across nala near Amalazari in Bilagi Taluk | Bagalkot | BCB | 40.00 | 78.00 | 0.00 | 0.00 | 78.00 | 37.05 | 37.05 | 74.10 | 3.50 |
| I17298 | 7 | Filling of Percolation Tank (Kattikere) near Jamakhandi Taluk | Bagalkot | PT | 28.35 | 92.00 | 0.00 | 0.00 | 92.00 | 43.70 | 43.70 | 87.40 | 4.50 |
| I17303 | 8 | Construction of Barrage across Pavatikhalla near Kamatgi Village in Hunagund Taluk | Bagalkot | BCB | 40.00 | 45.00 | 0.00 | 0.00 | 45.00 | 21.38 | 21.38 | 42.75 | 2.25 |
| I17305 | 9 | Construction of Barrage across Hirehalla near Togunshi (Site-2) in Badami Taluk | Bagalkot | BCB | 40.00 | 125.00 | 0.00 | 0.00 | 125.00 | 59.38 | 59.38 | 118.75 | 6.25 |
| I17306 | 10 | Improvements to Bandara Across Nala near Teggi Village in Badami Taluk | Bagalkot | BCB | 30.00 | 25.00 | 0.00 | 0.00 | 25.00 | 11.88 | 11.88 | 23.75 | 1.25 |
| I17304 | 11 | Construction of BCB across nala near Guledgudda Site 2 in Badami Taluk | Bagalkot | BCB | 40.00 | 120.00 | 0.00 | 0.00 | 120.00 | .57.00 | .57.00 | 114.00 | 6.00 |
| I17286 | 12 | Construction of Bandhara across nala near Bavoot, Village in Muddebhihal Taluk | Bijapur | BCB | 40.00 | 63.00 | 0.00 | 0.00 | 63.00 | 29.93 | 29.93 | 59.85 | 3.15 |
| I17281 | 13 | Construction of Bandhara across nala near MASUTI (Site-II) Village in B;Bagewadi Taluk | Bijapur | BCB | 45.00 | 66.00 | 0.00 | 0.00 | 66.00 | 31.35 | 31.35 | 62.70 | 3.30 |

| | | | | | | | | | | | | | |
|---|---|---|---|---|---|---|---|---|---|---|---|---|---|
| I117290 | 14 | Construction of Barrage cum Bridge near Nandageri village Sindagi Taluk | Bijapur | BCB | 101.00 | 200.00 | 0.00 | 0.00 | 200.00 | 95.00 | 95.00 | 190.00 | 10.00 |
| I17287 | 15 | Construction of Barrage across Dodda Halla near Kudal of Benakanalli in Indl. Taluk | Bijapur | BCB | 110.00 | 355.00 | 0.00 | 0.00 | 355.00 | 168.63 | 168.63 | 337.25 | 17.75 |
| I17288 | 16 | Construction of Barrage across cum Bridge near Tadawalege in Indl. Taluk | Bijapur | BCB | 45.00 | 100.00 | 0.00 | 0.00 | 100.00 | 47.50 | 47.50 | 95.00 | 5.00 |
| I17278 | 17 | Construction of Bandhara across nala near Bharatagi village in Bijapur Taluk | Bijapur | BCB | 40.00 | 72.00 | 0.00 | 0.00 | 72.00 | 34.20 | 34.20 | 68.40 | 3.60 |
| I17279 | 18 | Construction of Bandhara across nala near Ankalagi village in Bijapur Taluk | Bijapur | BCB | 40.00 | 58.00 | 0.00 | 0.00 | 58.00 | 27.55 | 27.55 | 55.10 | 2.90 |
| I17276 | 19 | Construction of Bandhara across nala near YATNAL (Site-II) village in Bijapur Taluk | Bijapur | BCB | 63.00 | 108.50 | 0.00 | 0.00 | 108.50 | 51.54 | 51.54 | 103.08 | 5.42 |
| I17277 | 20 | Construction of Bandhara across nala near Gonasagi village in Bijapur Taluk. | Bijapur | BCB | 52.00 | 90.00 | 0.00 | 0.00 | 90.00 | 42.75 | 42.75 | 85.50 | 4.50 |
| I17159 | 21 | Improvements to abbigundi Pickup channel near Panganali village in N.R. Pura Taluk | Chikmagalur | Pickup | 12.00 | 5.00 | 0.00 | 0.00 | 5.00 | 2.38 | 2.38 | 4.75 | 0.25 |
| I17163 | 22 | Construction of Channel near farm lands of Vijayendra and others from Neralekoppa Malali tank in N.R.Pura Taluk | Chikmagalur | Pickup | 10.00 | 5.00 | 0.00 | 0.00 | 5.00 | 2.38 | 2.38 | 4.75 | 0.25 |
| I17162 | 23 | Improvements to Chittikodige Sankshe Pickup of Gubbiga G.P. in N.R.Pura Taluk | Chikmagalur | Pickup | 11.00 | 5.00 | 0.00 | 0.00 | 5.00 | 2.38 | 2.38 | 4.75 | 0.25 |

| | | | | | | | | | | | | | |
|---|---|---|---|---|---|---|---|---|---|---|---|---|---|
| I17151 | 24 | Improvements to Pickup holla near Chinna Kudige Basle Colony of Bale village in N.R. Pura Taluk. | Chikmagalur | Pickup | 30.36 | 22.00 | 0.00 | 0.00 | 22.00 | 10.45 | 10.45 | 20.90 | 1.10 |
| I17160 | 25 | Improvements to Pickup holla near Maavinakudige of Saarya village in N.R.Pura Taluk | Chikmagalur | Pickup | 12.00 | 9.00 | 0.00 | 0.00 | 9.00 | 4.28 | 4.28 | 8.55 | 0.45 |
| I17158 | 26 | Improvements to Abbigundi Pickup channel of Seethur village in N.R.Pura Taluk | Chikmagalur | Pickup | 12.00 | 3.00 | 0.00 | 0.00 | 3.00 | 1.43 | 1.43 | 2.85 | 0.15 |
| I17157 | 27 | Construction of Protection wall to Bakrihalla (kabbana halla) pickup near land of Sri Mulavalli raju of Veggade in N.R.Pura Taluk. | Chikmagalur | Pickup | 15.00 | 18.00 | 0.00 | 0.00 | 18.00 | 8.55 | 8.55 | 17.10 | 0.90 |
| I17135 | 28 | Improvements to canal of Mallapura Pickup in Shikaripura Taluk. | Shimoga | Pickup | 42.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17132 | 29 | Construction of Pickup across Halla in Sy. No. 39 in Triyambakapura Village, Thirthahalli Taluk | Shimoga | Pickup | 28.00 | 25.00 | 0.00 | 0.00 | 25.00 | 11.88 | 11.88 | 23.75 | 1.25 |
| I17134 | 30 | Improvements to canal of Harige Ramalinganavaddu Pickup in Shikaripura Taluk | Shimoga | Pickup | 53.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17137 | 31 | Construction of Bridge of cum Barrage across halla Hosa Guddadahosalli in Shikaripura Taluk | Shimoga | BCB | 30.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17136 | 32 | Constructiion of Bridge cum | Shimoga | BCB | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |

| | | | | | | | | | | | | | |
|---|---|---|---|---|---|---|---|---|---|---|---|---|---|
| | | Barrage across halla near Malur in Shikaripura Taluk | | | | | | | | | | | |
| I17144 | 33 | Construction of Barrage across Sarala Hole near Nagavalli village Sagar Taluk | Shimoga | BCB | 30.00 | 45.00 | 0.00 | 0.00 | 45.00 | 21.38 | 21.38 | 42.75 | 2.25 |
| I17138 | 34 | Construction of Bridge cum Barrage across halla near Gerukoppa in Shikaripura Taluk | Shimoga | BCB | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17139 | 35 | Improvements to canals of Benakanahalla Pickup in Shikaripura Taluk | Shimoga | Pickup | 50.00 | 72.00 | 0.00 | 0.00 | 72.00 | 34.20 | 34.20 | 68.40 | 3.60 |
| I17141 | 36 | Construction of Barrage across Varada river near Kogdu Village in Sagar Taluk | Shimoga | BCB | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17142 | 37 | Construction of Bridge cum Barrage across Mavinahole near Padavagodu village in Sagar Taluk | Shimoga | BCB | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I17129 | 38 | Flood Protection Works to Left Bank of Tunga River near Malleswara (from CH:14,890 to 14,990 KM) in Shimoga Taluk. | Shimoga | FPW | 180.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| | | GRAND TOTAL | | | 1651.71 | 2704.50 | 0.00 | 0.00 | 2704.50 | 1284.64 | 1284.64 | .2569.28 | 135.22 |

$ If the State Govt. is able to execute the projects ahead of schedule, then the funds will be released accordingly

**RUDRAMURTHY**
Assistant Executive Engineer and
Ex-Officio Under Secretary to Government
Water Resources Department
(Minor Irrigation)

ಪಿ.ಆರ್. 82

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ.ಸಂಖ್ಯೆ 48ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂ.ಮೂಅಇ 103 ರಾರಾಹೆ 06 ದಿನಾಂಕ 4.7.2008
2. ಸರ್ಕಾರದ ಆದೇಶ ಸಂ: ಮೂಅಇ 17 ರಾರಾಹೆ 10 ದಿನಾಂಕ 12-03-2010
3. ಸರ್ಕಾರದ ಆದೇಶ ಸಂ.ಮೂಅಇ 17 ರಾರಾಹೆ 10 ದಿನಾಂಕ 14.7.2010.
4. ಪತ್ರ ಸಂ: ಕಾಇಂ/ಲೋಇ/ವಿ.ವಿ.ಶಿ/ಲೆ.ಶಾ/ಆರ್..ಓ.ಬಿ./10-11 ದಿನಾಂಕ: ಇಲ್ಲ, ಕಾರ್ಯಪಾಲಕ ಅಭಿಯಂತರರು, ಲೋಬಂ ಮತ್ತು ಒ.ಜ.ಸಾ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ.
5. ಸರ್ಕಾರದ ಆದೇಶ ಸಂ: ಮೂಅಇ 17 ರಾರಾಹೆ 10 ದಿನಾಂಕ 30-10-2010.
6. ಪತ್ರ ಸಂ: W/352/CN/BNC/ROB at LC No.48ರ ದಿನಾಂಕ 05-08-2011, ನೈರುತ್ಯ ರೈಲ್ವೆ ವಲಯದ ಮುಖ್ಯ ಆಡಳಿತಾಧಿಕಾರಿಯವರ ಕಛೇರಿಯ ಪತ್ರ.
7. ಪತ್ರ ಸಂ: ಸಂಕದ: ಸೇಶಿವ್ರ: ರೈಸಕಾ: ಶಿವಿವಿ: ಅನುದಾನ: 2011-12, ದಿನಾಂಕ 07-09-2011, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ಪತ್ರ.
8. ಸರ್ಕಾರಿ ಆದೇಶ ಸಂ: FD 124 BRS 2011, ಬೆಂಗಳೂರು, ದಿನಾಂಕ 12-12-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂ. (1)ರ ಸರ್ಕಾರಿ ಪತ್ರದಲ್ಲಿ ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ. ಸಂಖ್ಯೆ 48ರ ಬದಲಿಗೆ ರಸ್ತೆ ಮೇಲು ಸೇತುವೆ ಹಾಗೂ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ತಗಲುವ ಒಟ್ಟು ವೆಚ್ಚ ರೂ. 18.19 ಕೋಟಿಗಳ ಪರಿಷ್ಕೃತ ಅಂದಾಜಿಗೆ ತಗಲುವ ಒಟ್ಟು ಮೊತ್ತದ ಶೇ. 50ರಷ್ಟನ್ನು ರೈಲ್ವೆಯಿಂದ ಪಡೆಯುವ ಷರತ್ತಿಗೊಳಪಟ್ಟು ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2) ಮೇಲೆ ಓದಲಾದ ಕ್ರಮ ಸಂ. (2)ರ ಸರ್ಕಾರಿ ಆದೇಶದಲ್ಲಿ ಎಲ್.ಸಿ. ಸಂಖ್ಯೆ 48ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯನ್ನು ಪ್ರಾರಂಭಿಸಲು ಸ್ಥಳದಲ್ಲಿರುವ ವಿದ್ಯುತ್ ಕಂಬಗಳ ಸ್ಥಳಾಂತರ ಮತ್ತು ಅರಣ್ಯ ಇಲಾಖೆಗೆ ಸಂಬಂಧಿಸಿದ ಮರಗಳ ಕಡಿತಕ್ಕೆ ಹಾಗೂ ಯುಟಿಲಿಟಿ ಸ್ಥಳಾಂತರಕ್ಕೆ ರೂ. 2.00 ಕೋಟಿಯನ್ನು ಬಿಡುಗಡೆ ಮಾಡಲಾಗಿತ್ತು.

3) ಮೇಲೆ ಓದಲಾದ ಕ್ರಮ ಸಂ. (3)ರ ಸರ್ಕಾರಿ ಆದೇಶದಲ್ಲಿ ರೂ. 2.00 ಕೋಟಿಯನ್ನು ಬಿಡುಗಡೆ ಮಾಡಲಾಗಿತ್ತು. ಆದರೆ, ಮೇಲೆ ಓದಲಾದ ಕ್ರಮ ಸಂ. (4)ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ಲೋ ಬಂ ಮತ್ತು ಒ.ಜ.ಸಾ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ, ಇವರು ಮೇಲು ಸೇತುವೆ ಕಾಮಗಾರಿಗೆ ದಿನಾಂಕ 31.03.2010 ರವರೆಗೆ ರೂ. 53,76,921/-ಗಳ ವೆಚ್ಚವನ್ನು ಭರಿಸಲಾಗಿದೆ ಎಂದು ಈ ಕಾಮಗಾರಿಯು ಮೆ॥ ರೈಟ್ಸ್ ಕಂಪನಿ ಮಾಡಿರುವ ಕಾಮಗಾರಿ ವ್ಯತ್ಯಾಸ, ಮರು ವಿನ್ಯಾಸ ವಿಳಂಬವಾದ್ದರಿಂದ ಕಾಮಗಾರಿ ಕುಂಠಿತವಾಗಿದ್ದು, ಬಿಡುಗಡೆಯಾದ ಅನುದಾನವನ್ನು ದಿನಾಂಕ 31-03-2010ರೊಳಗೆ ಪೂರ್ಣಪ್ರಮಾಣದಲ್ಲಿ ಉಪಯೋಗಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

4) ಮೇಲೆ ಓದಲಾದ ಕ್ರಮ ಸಂ. (2), (3) ಮತ್ತು (5)ವರೆಗಿನ ಸರ್ಕಾರಿ ಆದೇಶಗಳಲ್ಲಿ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಮಾತ್ರ ರಾಜ್ಯ ಸರ್ಕಾರದ ಪಾಲಿನ ಮೊತ್ತ ಒಟ್ಟು ರೂ. 7.00 ಕೋಟಿಯನ್ನು ಬಿಡುಗಡೆ ಮಾಡಲಾಗಿತ್ತು. ರೈಲ್ವೆಯು ಕೈಗೆತ್ತಿಕೊಂಡಿರುವ ಸೇತುವೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 3.62 ಕೋಟಿಯನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ ರೈಲ್ವೆಯು ಇದುವರೆಗೂ ರಾಜ್ಯ ಸರ್ಕಾರದ ಪಾಲಿನ ಮೊತ್ತವನ್ನು ಬಿಡುಗಡೆ ಮಾಡಬೇಕೆಂಬ ಕೋರಿಕೆಯನ್ನು ಸಲ್ಲಸದೇ ಇರುವುದರಿಂದ ಹಾಗೂ ಅಪ್ರೋಚ ರಸ್ತೆಗೆ ತಗಲುವ ವೆಚ್ಚವನ್ನು ಕಾಮಗಾರಿ ಪೂರ್ಣಗೊಂಡ ನಂತರ ಸರಿದೂಗಿಸಲಾಗುವುದು ಎಂದು ಮೇಲೆ ಓದಲಾದ ಕ್ರಮ ಸಂ. (6)ರ ಪತ್ರದಲ್ಲಿ ನೈರುತ್ಯ ರೈಲ್ವೆಯು ತಿಳಿಸಿದೆ ಮತ್ತು ಸೇತುವೆ ನಿರ್ಮಾಣದ ವೆಚ್ಚಕ್ಕೆ ರಾಜ್ಯ ಸರ್ಕಾರದ ಪಾಲು ರೂ. 3.62 ಕೋಟಿಗಳಲ್ಲಿ ಬಾಕಿ ರೂ. 17.46 ಲಕ್ಷಗಳನ್ನು ರಾಜ್ಯ ಸರ್ಕಾರವೇ ರೈಲ್ವೆಗೆ ಬಿಡುಗಡೆ ಮಾಡಬೇಕೆಂದು ಸಹ ತಿಳಿಸಿರುತ್ತಾರೆ.

5) ಮೇಲೆ ಓದಲಾದ ಕ್ರ.ಸಂ (7) ಪತ್ರದಲ್ಲಿ ಮುಖ್ಯ ಇಂಜಿನಿಯರ್ (ದಕ್ಷಿಣ), ಸಂಪರ್ಕ) ಮತ್ತು ಕಟ್ಟಡ, ಲೋಕೋಪಯೋಗಿ ಇಲಾಖೆ, ಬೆಂಗಳೂರು ಇವರು ಸೇತುವೆ ಕಾಮಗಾರಿ ಹಾಗೂ ಅಪ್ರೋಚ್ ರಸ್ತೆ ನಿರ್ಮಾಣದ ಎರಡೂ ಕಾಮಗಾರಿಗಳನ್ನು ಎಲ್ಲಾ ಹಂತದಲ್ಲಿಯೂ ಪೂರ್ಣಗೊಳಿಸಲು ಗುತ್ತಿಗೆದಾರರೊಂದಿಗೆ ಸಮಾಲೋಚಿಸಿ ಕಾರ್ಯಸೂಚಿ ರೂಪಿಸಿದ್ದು, ಕಾಮಗಾರಿ ಪ್ರಗತಿಯಲ್ಲಿದೆ ಹಾಗೂ ಕೆಲವು ಅನುವಾರ್ಯತೆಯಿಂದಾಗಿ ಕಾಮಗಾರಿ ಪೂರ್ಣಗೊಳಿಸಲು ವಿಳಂಬವಾಗಿದ್ದು ಸಾರ್ವಜನಿಕರು ಹಾಗೂ ಜನಪ್ರತಿನಿಧಿಗಳಿಂದ ಜಿಲ್ಲಾಡಳಿತದ ಮೇಲೆ ಒತ್ತಡವಿದ್ದು ಪ್ರಸ್ತುತ ಹಂತದಲ್ಲಿ ಗುತ್ತಿಗೆದಾರರು ಇಲಾಖೆಯಿಂದ ಆರ್ಥಿಕ ಬೆಂಬಲ ನಿರೀಕ್ಷಿಸಿದ್ದು, ಅದು ದೊರಕದೇ ಕಾಮಗಾರಿ ಸ್ಥಗಿತಗೊಳಿಸಿದಲ್ಲಿ ಆರ್ಥಿಕ ಹೊರೆಯ ಜೊತೆಗೆ ಬೇರೊಬ್ಬ ಗುತ್ತಿಗೆದಾರರಿಂದ ಕಾಮಗಾರಿಯನ್ನು ಕೈಗೊಳ್ಳುವುದು ಕಷ್ಟವಾಗುವುದರಿಂದ ಕಾಮಗಾರಿಗಳನ್ನು ಯಾವುದೇ ಅಡಚಣೆ ಇಲ್ಲದೆ ಮುಂದುವರೆಸಲು ಪ್ರಸ್ತುತ ಪ್ರಗತಿಯಂತೆ ರೂ. 3.00 ಕೋಟಿ ಬಿಲ್ಲುಗಳನ್ನು ಪಾವತಿಸಲು ಅನುಕೂಲವಾಗುವಂತೆ ಅವಶ್ಯವಿರುವ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

6) ಮೇಲೆ ಓದಲಾದ ಕ್ರ.ಸಂ. (8)ರಲ್ಲಿ ಆರ್ಥಿಕ ಇಲಾಖೆಯು 2011-12ನೇ ಸಾಲಿನ ಆಯವ್ಯಯದ ರಸ್ತೆ ಕೆಳ ಸೇತುವೆ/ಮೇಲು ಸೇತುವೆ ಲೆಕ್ಕ ಶೀರ್ಷಿಕೆ 5465-01-190-3-04-211-ಬಂಡವಾಳ, ಇದರಡಿಯಲ್ಲಿ ಒದಗಿಸಿರುವ ರೂ. 21.49 ಕೋಟಿಗಳ ಮೊತ್ತವು ಸಂಪೂರ್ಣವಾಗಿ ವೆಚ್ಚವಾಗಿರುವುದರಿಂದ ಸೋಲಾಪುರ-ಗದಗ ಗೇಜ್ ಪರಿವರ್ತನೆಯ ಕಾಮಗಾರಿಯ ವೆಚ್ಚ ಹಂಚಿಕೆಯ ಲೆಕ್ಕ ಶೀರ್ಷಿಕೆ 5465-01-190-3-03-2011-ಬಂಡವಾಳ, ಇದರಡಿಯಲ್ಲಿ ಉಳಿತಾಯವಿರುವ ರೂ. 5.00 ಕೋಟಿಗಳಿಂದ ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಆದೇಶವನ್ನು ಹೊರಡಿಸಿದೆ.

7) ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 17 ರಾರಾಹೆ 2010, ಬೆಂಗಳೂರು, ದಿನಾಂಕ: 26–12–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ. ಸಂಖ್ಯೆ 48 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ. 3.00 ಕೋಟಿಯನ್ನು (ರೂಪಾಯಿ ಮೂರು ಕೋಟಿಗಳು ಮಾತ್ರ) ಬಿಡುಗಡೆ ಮಾಡಿದೆ. ಈ ಮೊತ್ತವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಿಸಿರುವ ರೂ. 21.49 ಕೋಟಿಗಳ ಮೊತ್ತವು ಸಂಪೂರ್ಣವಾಗಿ ವೆಚ್ಚವಾಗಿರುವುದರಿಂದ, ರೂ. 3.00 ಕೋಟಿಗಳನ್ನು ಸೋಲಾಪುರ – ಗದಗ ಗೇಜ್ ಪರಿವರ್ತನೆಯ ಕಾಮಗಾರಿಯ ವೆಚ್ಚ ಹಂಚಿಕೆಯ ಲೆಕ್ಕ ಶೀರ್ಷಿಕೆ 5465–01–190–3–03–211–ಬಂಡವಾಳ, ಇದರಡಿಯಲ್ಲಿ ಉಳಿತಾಯವಿರುವ ರೂ. 5.00 ಕೋಟಿಗಳಿಂದ ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಶೇಷ ವಿಭಾಗ, ಶಿವಮೊಗ್ಗ ಇವರು ಹಣಸಂದ ರಶೀದಿ (Payees receipt) ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ಸಹಿಯೊಂದಿಗೆ ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿ ಪಡೆಯತಕ್ಕದ್ದು.

3. ಈ ಆದೇಶವನ್ನು ಟಿಪ್ಪಣಿ ಸಂಖ್ಯೆ FD 1728/ವೆಚ್ಚ–1/11, ದಿನಾಂಕ 13.12.2011ರ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 83

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಚಟ್ಟನಹಳ್ಳಿ (ಮರಿಯಪ್ಪನ ಕೊಪ್ಪಲು) ಬಳಿ ದಂಡಿಗನಹಳ್ಳಕ್ಕೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(4), ದಿನಾಂಕ: 16–09–2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.2/ಸ.ಇಂ.5/ಹಾಸನ/ಎ.ಐ.ಬಿ.ಪಿ/ಇ–ಟೆಂಡರ್/2640/2011/3829, ದಿನಾಂಕ: 01–12–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಚಟ್ಟನಹಳ್ಳಿ (ಮರಿಯಪ್ಪನ ಕೊಪ್ಪಲು) ಬಳಿ ದಂಡಿಗನಹಳ್ಳಕ್ಕೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯ ರೂ. 100.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಅಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮೊದಲೆರಡು ಬಾರಿ ಕರೆದ ಟೆಂಡರ್ ಕರೆಗೆ ಸ್ವೀಕೃತವಾಗಿದ್ದ ಟೆಂಡರಿನ ತಾಂತ್ರಿಕ ಬಿಡ್‌ಗಳು ಅನರ್ಹವಾಗಿರುತ್ತವೆ. ಆದ್ದರಿಂದ ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 3ನೇ ಬಾರಿಗೆ ಟೆಂಡರ್ ಕರೆದಿದ್ದು, ಈ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 12–09–2011 |
| ಉದಯವಾಣಿ ಮತ್ತು ಹೊಸದಿಗಂತ ದಿನ ಪತ್ರಿಕೆ | 13–09–2011 |
| ಡೆಕ್ಕನ್ ಹೆರಾಲ್ಡ್ | 13–09–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಭಾಗವಹಿಸಿದ್ದು ಅವರ ಟೆಂಡರ್ ಅರ್ಹವಾಗಿದ್ದು, ಅದರ ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 95,44,595/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 96,86,859/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಎಸ್. ಆಶೋಕ್, 1ನೇ ದರ್ಜೆ ಗುತ್ತಿಗೆದಾರರು | 1,01,86,794/– | 6.73 ಹೆಚ್ಚು | 5.161 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.161 ರಷ್ಟು ಹೆಚ್ಚಾಗಿರುತ್ತದೆ. ಇವರ ಟೆಂಡರನ್ನು ಪರಿಶೀಲಿಸಿ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 96,86,859/–ಗಳ ಮೇಲೆ ಶೇಕಡ 5.00 ರಷ್ಟು ಹೆಚ್ಚಿನ ದರಗಳಲ್ಲಿ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಹೊಕೆನಿ 2011, (ತಾಂತ್ರಿಕ), ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಚಟ್ಟನಹಳ್ಳಿ (ಮರಿಯಪ್ಪನ ಕೊಪ್ಪಲು) ಬಳಿ ದಂಡಿಗನಹಳ್ಳಕ್ಕೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 96,86,859/–ಗಳ ಮೇಲೆ ಶೇ. 5.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 1,01,71,202/–ಗಳಿಗೆ (ರೂ. ಒಂದು ಕೋಟಿ ಒಂದು ಲಕ್ಷ ಎಪ್ಪತ್ತೊಂದು ಸಾವಿರದ ಎರಡು ನೂರ ಎರಡು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಬಿ.ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 84

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕಿನ ಕಲಾದಗಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ವಿದ್ಯುತ್ತೀಕರಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಏನೀಯೋ 2007 ದಿನಾಂಕ: 30–05–2007.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ ಮುಇಂ/ಸನೀ(ಉ)ವಲಯ/ಬಿಜೆಪಿಇ–6/2011–12/5778 ದಿನಾಂಕ: 16–11–2011.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕಿನ ಕಲಾದಗಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿಯ ರೂ. 175.20 ಲಕ್ಷ ಮೊತ್ತದ ಅಂದಾಜಿಗೆ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯರವರ ಕಛೇರಿ ನೋಂದಣಿ ಸಂಖ್ಯೆ: 06/2007–08ರಲ್ಲಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ. ಈ ಪೈಕಿ ಸಿವಿಲ್ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಪ್ರತ್ಯೇಕವಾಗಿ ಕೈಗೊಳ್ಳಲಾಗಿರುತ್ತದೆ. ವಿದ್ಯುತ್ತೀಕರಣ ಕಾಮಗಾರಿಯ ರೂ. 30,56,312/– ಮೊತ್ತದ ಉಪ ಅಂದಾಜಿಗೆ HESCOM ನಿಂದ ಮಂಜೂರಾತಿ ಪಡೆಯಲಾಗಿರುತ್ತದೆ. ಇದಕ್ಕೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ರವರು ತಾಂತ್ರಿಕ ಅನುಮೋದನೆಯನ್ನು ನೀಡಿರುತ್ತಾರೆ.

ವಿದ್ಯುತ್ತೀಕರಣ ಕಾಮಗಾರಿಗಾಗಿ ಈಗ ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 01–10–2011 |
| ಕನ್ನಡ ಪ್ರಭ ದಿನಪತ್ರಿಕೆ | 30–09–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿರುತ್ತಾರೆ. ಇವರು ಅರ್ಹತೆ ಹೊಂದಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 24,14,911/– |
|---|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಮೆ. ಗುರುದತ್ತ ಎಲೆಕ್ಟ್ರಿಕಲ್ಸ್ ಗುತ್ತಿಗೆದಾರರು | 27,58,740/– | 14.237 ಹೆಚ್ಚು | 14.237 ಹೆಚ್ಚು |

ಮೇಲ್ಕಂಡಂತೆ ಮೆ. ಗುರುದತ್ತ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.237 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 14–12–2011ರ ಪತ್ರದಲ್ಲಿ ಪ್ರಸ್ತುತ ಮಾರುಕಟ್ಟೆಯಲ್ಲಿ ಕಂಡಕ್ಟರ್‌ಗಳು, ಪೋಲ್‌ಗಳು, ಇನ್ಸುಲೇಟರ್‌ಗಳು, ಡಿಸ್ಕ್‌ಗಳು ಇತ್ಯಾದಿ ಕಚ್ಚಾ ಸಾಮಗ್ರಿಗಳ ಬೆಲೆಗಳು ಅಂದಾಜಿನಲ್ಲಿ ಅಳವಡಿಸಿಕೊಂಡಿರುವ ದರಗಳಿಗಿಂತಲೂ ತುಂಬಾ ಹೆಚ್ಚಾಗಿದ್ದು ವಾಸ್ತವವಾಗಿ ಕಾಮಗಾರಿಯನ್ನು

In the 26th State High Level Clearance Committee (SHLCC) Meeting held on 9-11-2011, the proposal of the Company wad discussed and approved.

Government has examined the recommendations made by the 26th State High Level Clearance Committee Meeting held on 9-11-2011, in all aspects.

Hence the following order.

**GOVERNMENT ORDER NO. CI 262 SPI 2011, BANGALORE, DATED 16-12-2011.**

Government is pleased to accord in principle approval to the Project Proposal of M/s. . Exedy Clutch India Private Limited to establish manufacturing unit for multi plate clutch, continuance variable transmission (CVT), cultch disc and clutch cover assembly and its components for both 2 and 4 wheelers" at Narasapura Industrial area, Kolar District with an investment of Rs. 242.00 crores, generating employment to about 1000 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 30 acres of land to be allotted by KIADB at Narasapura Industrial area, Kolar District.
2. **Water :** 300 KLD to be supplied by KIADB.
3. **Power :** 4000 of power to be supplied by BESCOM.
4. **Incentives & Concessions** As per applicable Industrial Policy of the State.

**GENERAL TERMS AND CONDITIONS :**

1. **Environment :** The promoters as to obtain CFE from KPSCB Environmental clearance from MOEF, GOI / DFEE Gok as applicable.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Government of Karnataka. A copy of Human Resources Development plan shall be sent to the Commissioner for I.D. & Director of Industries and commerce for monitoring.
3. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :**
   c) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   d) The promoters shall take all statutory and other necessary clearances from the competent authorities including GOI and shall submit milestones/progress in implementation of the projects regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka,

**JYOTHI R.J.**

Desk Officer (Technical Cell)

Commerce & Industries Department.

P.R.99

## COMMERCE AND INDUSTRIES SECRETARIAT

**Sub :** Approval to the Project Proposal of M/s. Haveri Bioenergy Pvt. Ltd., to establish an unit for "10 MW Electricity Generation from Agricultural Wastes" near Gutaal, Haveri Taluk, Haveri District.

**Read :** Proceedings of the 26th State High Level Clearance Committee (SHLCC) Meeting held on 9-11-2011.

**Preamble :**

M/s. Haveri Bioenergy Pvt. Ltd., has proposed to establish an unit for "10 MW Electricity Generation from Agricultural Wastes" near Gutaal, Haveri Taluk, Haveri District, with an investment of Rs. 55.55 crores, generating employment to about 85 persons.

In the 26th State High Level Clearance Committee (SHLCC) Meeting held on 9-11-2011, the proposal of the Company wad discussed and approved.

Government has examined the recommendations made by the 26th State High Level Clearance Committee Meeting held on 9-11-2011, in all aspects.

Hence the following order.

**GOVERNMENT ORDER NO. CI 273 SPI 2011, BANGALORE, DATED 16-12-2011.**

Government is pleased to accord in principle approval to the Project Proposal of M/s. . Haveri Bioenergy Pvt. Ltd., to establish an unit for "10 MW Electricity Generation from Agricultural Wastes" near Gutaal, Haveri Taluk, Haveri District, with an investment of Rs. 55.55 crores, generating employment to about 85 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 30 acres of land to be purchased U/s 109 of KLR conversion of the same for Industrial use.
2. **Water :** 11.50 Cubic meter per hour to be supplied from local authorities.
3. **Power :** 250 KVA to be serviced by HESCOM.
4. **Incentives & Concessions** As per applicable Industrial Policy of the State.

**GENERAL TERMS AND CONDITIONS :**

1. **Environment :** The promoters as to obtain CFE from KPSCB Environmental clearance from MOEF, GOI / DFEE Gok as applicable.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Government of Karnataka. A copy of Human Resources Development plan shall be sent to the Commissioner for I.D. & Director of Industries and commerce for monitoring.
3. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :**
   a) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the projects regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka,
**JYOTHI R.J.**
Desk Officer (Technical Cell)
Commerce & Industries Department.

P.R.100

## ಇಂಧನ ಸಚಿವಾಲಯ

**ವಿಷಯ :** ರಾಜ್ಯದಲ್ಲಿರುವ ಅನಧಿಕೃತ ನೀರಾವರಿ ಪಂಪ್ ಸೆಟ್‌ಗಳ ಸಕ್ರಮೀಕರಣಕ್ಕಾಗಿ ನೊಂದಣಿ ದಿನಾಂಕವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 9 ಪಿಎಸ್‌ಆರ್ 2011 ದಿನಾಂಕ : 11–03–2011.
2. ಸುತ್ತೋಲೆ ಸಂಖ್ಯೆ : ಇಎನ್ 9 ಪಿಎಸ್‌ಆರ್ 2011 ದಿನಾಂಕ : 27–04–2011.
3. ಸುತ್ತೋಲೆ ಸಂಖ್ಯೆ : ಇಎನ್ 9 ಪಿಎಸ್‌ಆರ್ 2006 ದಿನಾಂಕ : 30–06–2011.

**ಪ್ರಸ್ತಾವನೆ :**

ರಾಜ್ಯದಲ್ಲಿ ಚಾಲ್ತಿಯಲ್ಲಿರುವ ರೈತರ ಅನಧಿಕೃತ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸಲು ಉಲ್ಲೇಖ (1)ರ ಅನ್ವಯ ಆದೇಶ ಹೊರಡಿಸಲಾಗಿರುತ್ತದೆ. ಈ ಸಂಬಂಧ ರೈತರು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಅರ್ಜಿಗಳನ್ನು ನೋಂದಾಯಿಸಲು ಅಂತಿಮವಾಗಿ ಉಲ್ಲೇಖ (3)ರ ಅನ್ವಯ ದಿನಾಂಕ : 31–07–2011 ರವರೆಗೆ ಗಡುವು ನೀಡಲಾಗಿತ್ತು. ಆದರೆ ಹಲವಾರು ರೈತರಿಗೆ ಈ ಬಗ್ಗೆ ವ್ಯಾಪಕ ಪ್ರಚಾರ ದೊರೆಯದೆ, ಅರ್ಜಿಗಳನ್ನು ಸಕಾಲದಲ್ಲಿ ನಿಗದಿತ ಗಡುವಿನ ದಿನಾಂಕದೊಳಗೆ ನೋಂದಾಯಿಸಲು ಸಾಧ್ಯವಾಗದ ಕಾರಣ, ನೋಂದಣಿ ದಿನಾಂಕವನ್ನು ವಿಸ್ತರಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಮಾನ್ಯ ಶಾಸಕರುಗಳಿಂದ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಂದಲೂ ಸಹ ಕೋರಿಕೆ ಪತ್ರಗಳು ಸ್ವೀಕೃತವಾಗಿರುತ್ತವೆ. ಈ ವಿಷಯವಾಗಿ ಇತ್ತೀಚಿನ ವಿಧಾನ ಸಭೆ ಅಧಿವೇಶನದಲ್ಲಿಯೂ ಸಹ ಮಾನ್ಯ ಶಾಸಕರುಗಳು ಸನ್ಮಾನ್ಯ ಇಂಧನ ಸಚಿವರನ್ನು ದಿನಾಂಕ ವಿಸ್ತರಿಸುವಂತೆ ಮನವಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ರೈತರ ಅನಧಿಕೃತ ಪಂಪ್ ಸೆಟ್‌ಗಳನ್ನು ಸಕ್ರಮೀಕರಣಗೊಳಿಸಲು ಅರ್ಜಿಯನ್ನು ನೋಂದಾಯಿಸಲು ಅವಧಿಯನ್ನು ವಿಸ್ತರಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 09 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ : 23–12–2011**

ರಾಜ್ಯದ ಎಲ್ಲಾ ವಿತರಣಾ ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಅಕ್ರಮ ನೀರಾವರಿ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸಲು ರೈತರು ತಮ್ಮ ಅರ್ಜಿಗಳನ್ನು ನೋಂದಾಯಿಸಲು ದಿನಾಂಕ 31–01–2012 ರವರೆಗೆ ಅವಧಿಯನ್ನು ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 105 ಇಂಧನ ಇಲಾಖೆ

**ಇಂಧನ ಸಚಿವಾಲಯ**

**ವಿಷಯ :** ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 17.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಡಿಇ 26 ಎನ್‌ಸಿಇ 1999, ದಿನಾಂಕ : 13–05–1999.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 259 ಎನ್‌ಸಿಇ 2004, ದಿನಾಂಕ : 18–03–2005.
3. ಸರ್ಕಾರದ ಆದೇಶ ಸಂಖ್ಯೆ : ಇಎನ್ 448 ಎನ್‌ಸಿಇ 2008, ದಿನಾಂಕ : 20–06–2009.
4. ಸರ್ಕಾರದ ಆದೇಶ ಸಂಖ್ಯೆ : ಇಎನ್ 448 ಎನ್‌ಸಿಇ 2008, ದಿನಾಂಕ : 04–03–2011.
5. ಸರ್ಕಾರದ ಆದೇಶ ಸಂಖ್ಯೆ : ಇಎನ್ 448 ಎನ್‌ಸಿಇ 2008, ದಿನಾಂಕ : 02–08–2011.
6. ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಮನವಿ ಪತ್ರ ಸಂಖ್ಯೆ : AMTL/Energy Minister/2011-12/17, ದಿನಾಂಕ : 20–09–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಅರಸಿನಗುಂಡಿ ಗಾಳಿವಲಯ ಪ್ರದೇಶದ ತುರುವನೂರು (4 ಮೆ.ವ್ಯಾ) ಮತ್ತು ಮದನಾಯಕನಹಳ್ಳಿ (7.2 ಮೆ.ವ್ಯಾ.) ಗ್ರಾಮಗಳಲ್ಲಿ ಒಟ್ಟು 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿ ವಲಯ ಪ್ರದೇಶಗಳಲ್ಲಿ ಹಂಚಿಕೆಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 17.25 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೇಲಿನ ದಿನಾಂಕ : 20–06–2009ರ ಆದೇಶದಲ್ಲಿ ರದ್ದುಪಡಿಸಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಯೋಜನೆಯ ಅನುಷ್ಠಾನಕ್ಕಾಗಿ ಕೊನೆಯ ಅವಕಾಶವಾಗಿ ಕಾಲಾವಕಾಶವನ್ನು ಕೆಲವೊಂದು ನಿಬಂಧನೆಗೊಳಪಟ್ಟು ದಿನಾಂಕ : 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿ ವಲಯ ಪ್ರದೇಶಗಳಲ್ಲಿ ಹಂಚಿಕೆಯಾಗಿದ್ದ 6.05 ಮೆಗಾ ವ್ಯಾಟ್ ಹೆಚ್ಚುವರಿ ಸಾಮರ್ಥ್ಯ (17.25 – 11.2 =6.05 ಮೆ.ವ್ಯಾ.) ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೂ ಕಾಲಾವಕಾಶವನ್ನು ದಿನಾಂಕ : 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರು ಚಿತ್ರದುರ್ಗ ಜಿಲ್ಲೆಯ ಅರಸಿನಗುಂಡಿ ಗಾಳಿ ವಲಯ ಪ್ರದೇಶದ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 17.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ಡಿಸೆಂಬರ್ 2012ರ ಅಂತ್ಯದವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 448 ಎನ್‌ಸಿಇ 2008 (2), ಬೆಂಗಳೂರು, ದಿನಾಂಕ : 28–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಅರಸಿನಗುಂಡಿ ಗಾಳಿವಲಯ ಪ್ರದೇಶದ ತರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 17.25 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಕಾಲಾವಕಾಶ ವಿಸ್ತರಣೆಯ ಶುಲ್ಕವನ್ನು ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ದಿನಾಂಕ : 31–12–2012 ರವರೆಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 106 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಸಾಯಿ ನಿರೀಹಾ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಡಿಇ 28 ಎನ್‌ಸಿಇ 1996 (15), ದಿನಾಂಕ : 24–07–1996.
2. ಸರ್ಕಾರದ ಆದೇಶ ಸಂಖ್ಯೆ : ಡಿಇ 46 ಎನ್‌ಸಿಇ 1997, ದಿನಾಂಕ : 24–06–1999.
3. ಸರ್ಕಾರದ ಆದೇಶ ಸಂಖ್ಯೆ : ಡಿಇ 03 ಎನ್‌ಸಿಇ 2002, ದಿನಾಂಕ : 01–04–2002.
4. ಸರ್ಕಾರದ ಆದೇಶ ಸಂಖ್ಯೆ : ಡಿಇ 248 ಎನ್‌ಸಿಇ 2004, ದಿನಾಂಕ : 26–08–2004.
5. ಸರ್ಕಾರದ ಆದೇಶ ಸಂಖ್ಯೆ : ಇಎನ್ 520 ಎನ್‌ಸಿಇ 2008, ದಿನಾಂಕ : 29–06–2010.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-30/ಕಟ್ಟೆಪುರ ಎಂಹೆಚ್‌ಎಸ್/2011/4249 ದಿನಾಂಕ : 31–10/02–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಪೇಪರ್ ಪ್ಯಾಕಿಂಗ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಕಟ್ಟೆಪುರದಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಪೇಪರ್ ಪ್ಯಾಕಿಂಗ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರನ್ನು ಮೆ॥ ಬ್ರೈಟ್ ವಿದ್ಯುತ್ ಕಂಪನಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ಬ್ರೈಟ್ ವಿದ್ಯುತ್ ಕಂಪನಿ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರನ್ನು ಮೆ॥ ಕಾವೇರಿ ಹೈಡ್ರೊ ಎನರ್ಜಿ ಲಿಮಿಟೆಡ್ ಎಂದು ಬದಲಾಯಿಸಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೇಲ್ಕಂಡ ಯೋಜನೆಯನ್ನು ಮೆ॥ ಸಾಯಿ ನಿರೀಹಾ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಸಾಯಿ ನಿರೀಹಾ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಕಟ್ಟೆಪುರ ಎಂಬಲ್ಲಿ ಹಂಚಿಕೆಯಾಗಿದ್ದ ಮೇಲ್ಕಂಡ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ : 01–10–2009 ರಿಂದ ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ॥ ಸಾಯಿ ನಿರೀಹಾ ಪ್ರೈವೇಟ್ ಲಿಮಿಟೆಡ್ ಇವರಿಗೆ ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿದ್ದ ಅವಧಿಯು ಸೆಪ್ಟೆಂಬರ್ 2011ಕ್ಕೆ ಮುಗಿದಿದ್ದು, ಯೋಜನೆಯು ಅನುಷ್ಠಾನದ ಹಂತದಲ್ಲಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯ ಹಿನ್ನೆಲೆಯಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಮೆಗಾವ್ಯಾಟ್ ಒಂದಕ್ಕೆ ರೂ. 3.00 ಲಕ್ಷಗಳು Performance guarantee ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ಕೊನೆಯ ಅವಕಾಶವಾಗಿ ಕಾಲವಕಾಶವನ್ನು ಮತ್ತೆ ಒಂದು ವರ್ಷದವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 428 ಎನ್‌ಸಿಇ 2011, ಬೆಂಗಳೂರು, ದಿನಾಂಕ : 29–12–2011**

ಮೆ॥ ಸಾಯಿ ನಿರೀಹಾ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಕಟ್ಟೆಪುರ ಎಂಬಲ್ಲಿ ಹಂಚಿಕೆಯಾಗಿದ್ದ ಮೇಲ್ಕಂಡ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಕೊನೆಯದಾಗಿ ದಿನಾಂಕ : 01–10–2011 ರಿಂದ 30–09–2012 ರವರೆಗೆ ಕೆಳಕಂಡ ಷರತ್ತಿಗೊಳಪಟ್ಟು ವಿಸ್ತರಿಸಲಾಗಿದೆ.

1. ಸದರಿ ಯೋಜನೆ ಸಂಬಂಧ, ಸಂಬಂಧಿಸಿದ ಪ್ರಾದೇಶಿಕ ಮತ್ತು ವನ್ಯಜೀವಿ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಹಮತಿ ಪಡೆಯತಕ್ಕದ್ದು.
2. ಮೆಗಾವ್ಯಾಟ್ ಒಂದಕ್ಕೆ ರೂ. 3.00 ಲಕ್ಷಗಳು Performance guarantee ನ್ನು ನೀಡತಕ್ಕದ್ದು.
3. ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 107

## ವಸತಿ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ ಪರಿಷ್ಕೃತ ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಂ.ವಇ/42/ಹೆಚ್‌ಎಎಂ/1999, ದಿನಾಂಕ : 10–05–2000.
2. ಸರ್ಕಾರದ ಆದೇಶ ಸಂಖ್ಯೆ : ಸಂ.ವಇ/28/ಹೆಚ್‌ಎಎಂ/2011, ದಿನಾಂಕ : 26–07–2011.
3. ರಾಜ್ಯಾಧ್ಯಕ್ಷರು, ಭಾರತೀಯ ಜನತಾ ಪಾರ್ಟಿ ಇವರ ಪತ್ರ ಸಂಖ್ಯೆ : ರಾಕಾ/ನಾನಿ/506/2011, ದಿನಾಂಕ : 26–10–2011.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಬೆಳಗಾಂ ಜಿಲ್ಲೆ ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸಿ ಮೇಲೆ ಓದಲಾಗಿರುವ (2)ರ ಆದೇಶವನ್ನು ಹೊರಡಿಸಲಾಗಿತ್ತು. ಓದಲಾಗಿರುವ (3)ರ ಪತ್ರದಲ್ಲಿ ಶಿಫಾರಸ್ಸು ಮಾಡಿ ತಿಳಿಸಿರುವಂತೆ ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ಪರಿಷ್ಕೃತ ಆದೇಶ ನಾಮನಿರ್ದೇಶನ ಮಾಡಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 79 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 23–12–2011**

ಬೆಳಗಾಂ ಜಿಲ್ಲೆ ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀಮತಿ ಸುಚಿತ್ರಾ ವೆಂಕಟೇಶ ಕುಲಕರ್ಣಿ,<br>ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಸಾಮಾನ್ಯ ಮಹಿಳೆ |
| 2 | ಶ್ರೀ ವರ್ದಮಾನ್ ವಸಂತ ನಾಗಾಂವಕರ,<br>ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಅ.ಸಂ. |
| 3 | ಶ್ರೀ ರೋಹನ ಅಶೋಕ ರಾವೊತ,<br>ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಹಿಂ.ವ. |
| 4 | ಶ್ರೀ ಸುನೀಲ ಲಕ್ಷ್ಮಣ ಅಕ್ಕೋಳತೆ,<br>ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಎಸ್.ಸಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಶಂಕರಪ್ಪ**

ಪೀಠಾಧಿಕಾರಿ–2

ವಸತಿ ಇಲಾಖೆ

ಪಿ.ಆರ್. 109

## ಇಂಧನ ಸಚಿವಾಲಯ

**ವಿಷಯ :** ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ (GIM)ಕ್ಕೆ ಸಮೀಕ್ಷಾಧಿಕಾರಿ (Nodal Officer) ಮತ್ತು ಸಮನ್ವಯಾಧಿಕಾರಿ (Co-ordinating Officer) ಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅರೆ ಸರ್ಕಾರಿ ಪತ್ರ ಸಂಖ್ಯೆ : KUM/GIM-2012-FOC/2011–12, ದಿನಾಂಕ : 23–07–2011.
2. ಸರ್ಕಾರಿ ಆದೇಶ ಸಂಖ್ಯೆ ಇಎನ್ 85 ಪಿಪಿಸಿ 2011 ದಿನಾಂಕ : 05–09–2011.

**ಪ್ರಸ್ತಾವನೆ :**

1. ಮೇಲೆ ಓದಲಾದ ಕ್ರಮಸಂಖ್ಯೆ–1ರ ಅರೆಸರ್ಕಾರಿ ಪತ್ರದಲ್ಲಿ ದಿನಾಂಕ 07 ಮತ್ತು 08 ಜೂನ್ 2012ರಂದು ಬೆಂಗಳೂರು ಅಂತರಾಷ್ಟ್ರೀಯ ವಸ್ತು ಪ್ರದರ್ಶನ ಕೇಂದ್ರ (BIEC)ದಲ್ಲಿ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ (GIM)-2012ರ ಸಮಾವೇಶ ನಡೆಯಲಿದ್ದು, ಕರ್ನಾಟಕ ರಾಜ್ಯದ ಸಮಗ್ರ ಆರ್ಥಿಕ ಬೆಳವಣಿಗೆಗಾಗಿ ಸಾಧ್ಯವಾದ ಎಲ್ಲಾ ಕ್ಷೇತ್ರಗಳಲ್ಲೂ ಬಂಡವಾಳ ಹೂಡಿಕೆ ಬಗ್ಗೆ ಯೋಜಿಸಲಾಗಿದೆ.
2. ಮೇಲಿನ ಅರೆ ಸರ್ಕಾರಿ ಪತ್ರದಲ್ಲಿ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ–2012ರಲ್ಲಿ ಹೆಚ್ಚಿನ ಬಂಡವಾಳ ಹೂಡಲು ಸಹಕಾರಿಯಾಗುವಂತೆ ಸಮಾಲೋಚನೆ/ವಿಚಾರಗೋಷ್ಠಿ ನಡೆಸಲು ಇಂಧನ ಇಲಾಖೆಗೆ ಸಂಬಂಧಪಟ್ಟ ಕಾರ್ಯಪಡೆಯನ್ನು ನೇಮಿಸುವಂತೆ ಕೋರಲಾಗಿತ್ತು.
3. ಮೇಲೆ ಓದಲಾದ ಕ್ರಮಸಂಖ್ಯೆ–2ರ ಸರ್ಕಾರಿ ಆದೇಶದಲ್ಲಿ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ–2012ರಲ್ಲಿ ಹೆಚ್ಚಿನ ಬಂಡವಾಳ ಹೂಡಲು ಸಹಕಾರಿಯಾಗುವಂತೆ ಸಮಾಲೋಚನೆ/ವಿಚಾರಗೋಷ್ಠಿ ನಡೆಸಲು ಇಂಧನ ಇಲಾಖೆಗೆ ಸಂಬಂಧಪಟ್ಟ ಕಾರ್ಯಪಡೆಯನ್ನು ನೇಮಿಸಲಾಗಿತ್ತು.
4. GIM ಸಮಾವೇಶಗಳ ಬಗ್ಗೆ ಸಮನ್ವಯ ಸಾಧಿಸಲು ಇಂಧನ ಇಲಾಖೆಗೆ ಸಂಬಂಧಿಸಿದಂತೆ ಸಮೀಕ್ಷಾಧಿಕಾರಿ (Nodal Officer) ಮತ್ತು ಸಮನ್ವಯಾಧಿಕಾರಿ (Coordinating Officer)ಗಳನ್ನು ನೇಮಕ ಮಾಡುವ ಅವಶ್ಯಕತೆ ಇದೆ. ಆದ್ದರಿಂದ ಈ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 01 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ : 24–12–2011**

ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ ಆಯೋಜನೆಗಾಗಿ ಇಂಧನ ಇಲಾಖೆ ಮತ್ತು ಅಧೀನ ಸಂಸ್ಥೆಗಳು ಮತ್ತು ಸಮಾವೇಶಗಳ ಸಂಯೋಜಕರೊಂದಿಗೆ ಸಮನ್ವಯ ಸಾಧಿಸಲು ಈ ಕೆಳಕಂಡ ಅಧಿಕಾರಿಗಳನ್ನು ಸಮೀಕ್ಷಾಧಿಕಾರಿ (Nodal Officer) ಮತ್ತು ಸಮನ್ವಯಾಧಿಕಾರಿ (Co-ordinating Officer) ಗಳಾಗಿ ನೇಮಿಸಿ ಆದೇಶಿಸಿದೆ.

1. ವ್ಯವಸ್ಥಾಪಕ ನಿರ್ದೇಶಕರು, ಪಿ.ಸಿ.ಕೆ.ಎಲ್. — ಸಮೀಕ್ಷಾಧಿಕಾರಿ Nodal Officer
2. ವಿಶೇಷಾಧಿಕಾರಿ (ಸುಧಾರಣೆ), ಇಂಧನ ಇಲಾಖೆ — ಸಮನ್ವಯಾಧಿಕಾರಿ Co-ordinating Officer
3. ಕಾರ್ಯನಿರ್ವಾಹಕ ಇಂಜಿನಿಯರ್ (ವಿ)–1, ಇ.ಎಮ್.ಸಿ. ಇಂಧನ ಇಲಾಖೆ

ಕವಿಪ್ರನಿನಿ/ಕವಿನಿನಿ/ಕ್ರೆಡಲ್/ವಿಸಕಂಗಳಿಂದ ಒಬ್ಬ ಅಧಿಕಾರಿಯನ್ನು (ಮುಖ್ಯ ಇಂಜಿನಿಯರ್ (ವಿ)/ಅಧೀಕ್ಷಕ ಇಂಜಿನಿಯರ್ (ವಿ) ಮಟ್ಟದ ಅಧಿಕಾರಿ) ಸಮನ್ವಯ ಅಧಿಕಾರಿಯಾಗಿ ನೇಮಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 110

## ಇಂಧನ ಸಚಿವಾಲಯ

**ವಿಷಯ :** ಮೆ॥ ಭಾರತ್ ಶುಗರ್ ಮಿಲ್ಸ್ ಲಿಮಿಟೆಡ್ ನಿಂದ ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್‌ಗೆ ಕಂಪನಿಯ ಹೆಸರು ಬದಲಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಡಿಇ 99 ಎನ್‌ಸಿಇ 2002, ದಿನಾಂಕ : 10–05–2002.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 76 ಎನ್‌ಸಿಇ 2006, ದಿನಾಂಕ : 08–03–2006.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿಎಲ್/04/ಐಸಿಎಸ್/2011–12/4646, ದಿನಾಂಕ : 15–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ॥ ಭಾರತ್ ಶುಗರ್ ಮಿಲ್ಸ್ ಲಿಮಿಟೆಡ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಕೆಸೋರಳ್ಳಿ ಗ್ರಾಮದಲ್ಲಿ 7.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಭಾರತ್ ಶುಗರ್ ಮಿಲ್ಸ್ ಲಿಮಿಟೆಡ್ ಕಂಪನಿಗೆ ಸ್ಥಾಪಿತ 7.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು 24 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿದೆ ಹಾಗೂ ಯೋಜನಾ ಅನುಷ್ಠಾನ ಪ್ರದೇಶವನ್ನು ಕೆಸೋರಳ್ಳಿ ಗ್ರಾಮದಿಂದ ಹುಲ್ಲೆಟ್ಟಿ ಗ್ರಾಮಕ್ಕೆ ಬದಲಾಯಿಸಿ ಆದೇಶ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ॥ ಭಾರತ್ ಶುಗರ್ ಮಿಲ್ಸ್ ಲಿಮಿಟೆಡ್ (ಮೆ॥ ಜೆಎಂಆರ್ ಇಂಡಸ್ಟ್ರೀಸ್ ಲಿಮಿಟೆಡ್‌ನೊಂದಿಗೆ ವಿಲೀನಗೊಳಿಸಿದೆ) ರವರ ಕಂಪನಿಯ ಹೆಸರನ್ನು ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಎಂದು ಬದಲಾಯಿಸುವ ಹಿನ್ನೆಲೆಯಲ್ಲಿ ಪರಿಶೀಲಿಸಿ ಅಗತ್ಯ ಶುಲ್ಕವನ್ನು ಪಾವತಿಸಿಕೊಂಡು ಹೆಸರು ಬದಲಾವಣೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 469 ಎನ್‌ಸಿಇ 2011, ಬೆಂಗಳೂರು, ದಿನಾಂಕ : 21–12–2011**

ಮೆ॥ ಭಾರತ್ ಶುಗರ್ ಮಿಲ್ಸ್ ಲಿಮಿಟೆಡ್ ಕಂಪನಿಯ (ಮೆ॥ ಜೆಎಂಆರ್ ಇಂಡಸ್ಟ್ರೀಸ್ ಲಿಮಿಟೆಎಡ್‌ನೊಂದಿಗೆ ವಿಲೀನಗೊಂಡಿದೆ) ಹೆಸರನ್ನು ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಎಂದು ಬದಲಾಯಿಸಿ ಅನುಮೋದನೆ ನೀಡಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 111

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2011 ದಿನಾಂಕ : 29–04–2011, 10–06–2011, 03–08–2011 ಮತ್ತು 10–11–2011.
4. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಲ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರಸಂಖ್ಯೆ ಕೆಇಪಿಜಿಟಿ/ಕ–21/ಸ–1/672–75 ದಿನಾಂಕ : 12–11–2011.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1804 ವೆಚ್ಚ–1/2011, ದಿನಾಂಕ : 16–12–2011.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2)ರಲ್ಲಿ ಓದಲಾದ ಸರ್ಕಾರ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, (pay as you go) ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2011–12ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 400.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.
4. ಮೇಲೆ ಕ್ರಮಾಂಕ–(3)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2011–12ನೇ ಸಾಲಿಗೆ ರೂ. 300 ಕೋಟಿಗಳಷ್ಟು ಹಣ ಬಿಡುಗಡೆ ಮಾಡಿದೆ.
5. ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಪತ್ರದಲ್ಲಿ ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಅಧ್ಯಕ್ಷರು ಮತ್ತು ನಿರ್ದೇಶಕರು (ಹಣಕಾಸು), ಕವಿಪ್ರನಿನಿರವರು, 2011–12ರ ಆರ್ಥಿಕ ವರ್ಷಕ್ಕೆ ಉಳಿದ ಪಿಂಚಣಿ ಹಣ ರೂ. 100 ಕೋಟಿಗಳನ್ನು ಬಿಡುಗಡೆಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ.
6. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ 2011–12ನೇ ಸಾಲಿಗೆ ರೂ. 50 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಈ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ : 22–12–2011**

ಸರ್ಕಾರವು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ 2011–12ನೇ ಸಾಲಿನಲ್ಲಿ ಪಿಂಚಣಿ ವಂತಿಗೆ ರೂ. 50 ಕೋಟಿಗಳನ್ನು (ಐವತ್ತು ಕೋಟಿ ರೂ.ಗಳು ಮಾತ್ರ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಯಮಿತಕ್ಕೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು "2801–80–101–1–13–106" ಸಹಾಯಧನ (ಯೋಜನೇತರ) ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ" ಹಣ ಪಡೆದ 2 ದಿನದೊಳಗೆ ಪೂರ್ಣವಾಗಿ ಪಾವತಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1804 ವೆಚ್ಚ–1/2011 ದಿನಾಂಕ : 16–12–2011ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 112

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಖರೀದಿಗಳಿಗೆ (ಸಂಗ್ರಹಣೆ) ಸಂಬಂಧಿಸಿದಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಅನುಸರಿಸುವ ಬಗ್ಗೆ ಮಾರ್ಗಸೂಚಿ ರಚನೆಯ ಕುರಿತು.

**ಪ್ರಸ್ತಾವನೆ :**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಖೆ ವಿವಿಧ ಕೇಂದ್ರ ಪ್ರಾಯೋಜಿತ ಹಾಗೂ ರಾಜ್ಯ ಪ್ರಾಯೋಜಿತ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸುತ್ತಿದ್ದು, ವಿವಿಧ ಹಂತಗಳಲ್ಲಿ, ಸೇವೆಗಳು, ನಿರ್ಮಾಣ ಕಾಮಗಾರಿಗಳು, ಸಾಮಗ್ರಿಗಳ ಸರಕುಗಳ ಸರಬರಾಜುಗಳ ಸಂಗ್ರಹಣೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪರದರ್ಶಕತೆ ಅಧಿನಿಯಮ, 1999 ಮತ್ತು ತತ್ಸಂಬಂಧಿತ ನಿಯಮಾವಳಿ, 2000 ರನ್ವಯ ನಿಗದಿಪಡಿಸಲಾದ ಕಾರ್ಯವಿಧಾನವನ್ನು ಅನುಸರಿಸುತ್ತಿದೆ. ಈ ರೀತಿಯ ಸಂಗ್ರಹಣಾ ವಿಧಿವಿಧಾನವನ್ನು ಅನುಸರಿಸುವಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಸಂಗ್ರಹಣಾಧಿಕಾರಿಗಳು ಸದರಿ ನಿಯಮಾವಳಿಗಳ ಪೂರ್ಣ ತಿಳುವಳಿಕೆಯೊಂದಿಗೆ ಪಾಲನೆ ಮಾಡದಿರುವುದು ಮತ್ತು ಅದರಿಂದಾಗಿ ದೋಷಪೂರಿತ ಸಂಗ್ರಹಣೆಗಳಿಗೆ ಕಾರಣವಾಗುತ್ತಿರುವುದು ಕಂಡುಬಂದಿದ್ದು ಈ ಬಗ್ಗೆ ಸುಲಭವಾಗಿ ಅರ್ಥೈಸಿಕೊಂಡು ಸಂಗ್ರಹಣಾ ನಿಯಮಾವಳಿಯನ್ನು ಪಾಲನೆ ಮಾಡುವ ನಿಟ್ಟಿನಲ್ಲಿ ಅಗತ್ಯ ಮಾರ್ಗಸೂಚಿಗಳನ್ನು ನೀಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಕೆಳಗೆ ಹೇಳಿರುವ ಒಂದು ಸಮಿತಿಯನ್ನು ರಚಿಸಲು ನಿರ್ಧರಿಸಲಾಗಿದೆ.

ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 401 ಜಿಪಸ 2011, ಬೆಂಗಳೂರು, ದಿನಾಂಕ : 27–12–2011**

ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಖರೀದಿಗಳಿಗೆ (ಸಂಗ್ರಹಣೆ) ಸಂಬಂಧಿಸಿದಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಮತ್ತು ವಿಧಿವಿಧಾನಗಳನ್ನು ಪಾಲನೆ ಮಾಡಲು ಸುಲಭ ಸಾಧ್ಯವಾಗುವಂತೆ ಮಾರ್ಗಸೂಚಿಯನ್ನು ರಚಿಸಲು ಈ ಕೆಳಕಂಡ ಅಧಿಕಾರಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಅಧ್ಯಕ್ಷರು |
| 2. | ನಿರ್ದೇಶಕರು (ಗ್ರಾ.ಮೂ.ಸೌ–1) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 3. | ನಿರ್ದೇಶಕರು, (MGNRGES) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 4. | ಮುಖ್ಯ ಲೆಕ್ಕಾಧಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ | ಸದಸ್ಯರು |
| 5. | ಮುಖ್ಯ ಲೆಕ್ಕಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೆಂಗಳೂರು | ಸದಸ್ಯರು |
| 6. | ಹೆಚ್ಚುವರಿ ಮುಖ್ಯಸ್ಥರು (ಹಣಕಾಸು) ಗ್ರಾಮ ಸ್ವರಾಜ್ ಯೋಜನೆ | ಸದಸ್ಯರು |
| 7. | ಮುಖ್ಯಸ್ಥರು, ಡಿ.ಎ.ಸಿ. ಗ್ರಾಮ ಸ್ವರಾಜ್ ಯೋಜನೆ | ಸದಸ್ಯರು |
| 8. | ಮುಖ್ಯಸ್ಥರು, ಗ್ರಾಮ ಸ್ವರಾಜ್ ಯೋಜನೆ | ಸಂಚಾಲಕರು |

ಶ್ರೀ ತಲ್ಲೂರು ನಿವೃತ್ತ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಇವರು ಈ ಸಮಿತಿಗೆ ಸಲಹೆಗಾರರಾಗಿರುತ್ತಾರೆ.

**ಮಾರ್ಗಸೂಚಿ ರಚನಾ ಸಮಿತಿಯ ಕಾರ್ಯಸೂಚಿ :**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವಿವಿಧ ಕೇಂದ್ರ ಪ್ರಾಯೋಜಿತ ಹಾಗೂ ರಾಜ್ಯ ಪ್ರಾಯೋಜಿತ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸುತ್ತಿದ್ದು, ವಿವಿಧ ಹಂತಗಳಲ್ಲಿ, ಸೇವೆಗಳು, ನಿರ್ಮಾನ ಕಾಮಗಾರಿಗಳು, ಸಾಮಗ್ರಿಗಳ ಸರಕುಗಳ ಸರಬರಾಜುಗಳ ಸಂಗ್ರಹಣೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು ತತ್ಸಂಬಂಧಿತ ನಿಯಮಾವಳಿ, 2000 ರನ್ವಯ ನಿಗದಿಪಡಿಸಲಾದ ಕಾರ್ಯವಿಧಾನವನ್ನು ಅನುಸರಿಸುತ್ತಿದೆ. ಈ ರೀತಿಯ ಸಂಗ್ರಹಣಾ ವಿಧಿವಿಧಾನವನ್ನು ಅನುಸರಿಸುವಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಸಂಗ್ರಹಣಾಧಿಕಾರಿಗಳು ಸದರಿ ನಿಯಮಾವಳಿಗಳ ಪೂರ್ಣ ತಿಳುವಳಿಕೆಯೊಂದಿಗೆ ಪಾಲನೆ ಮಾಡದಿರುವುದು ಮತ್ತು ಅದರಿಂದಾಗಿ ದೋಷಪೂರಿತ ಸಂಗ್ರಹಣೆಗಳಿಗೆ ಕಾರಣವಾಗುತ್ತಿರುವುದು ಕಂಡುಬಂದಿದ್ದು ಈ ಬಗ್ಗೆ ಸುಲಭವಾಗಿ ಅರ್ಥೈಸಿಕೊಂಡು ಸಂಗ್ರಹಣಾ ನಿಯಮಾವಳಿಯನ್ನು ಪಾಲನೆ ಮಾಡುವ ನಿಟ್ಟಿನಲ್ಲಿ ಅಗತ್ಯ ಮಾರ್ಗಸೂಚಿಗಳನ್ನು ನೀಡಬೇಕಾಗಿರುತ್ತದೆ.

ಮೇಲೆ ವಿವರಿಸಿದ ಕಾರಣಗಳಿಗಾಗಿ ರಚಿಸಲಾದ ಸಮಿತಿಯು ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸುವುದು.

(1) ಪ್ರಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಾವಳಿ, 2000ನಲ್ಲಿ ನಿಗದಿಪಡಿಸಲಾದ ವಿಧಿ ವಿಧಾನಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ ಅನ್ವಯವಾಗುವ ನಿಯಮಗಳ ಪರಿಶೀಲನೆ, ಅನುಪಾಲನೆ ಮತ್ತು ತೊಡಕುಗಳ ಬಗ್ಗೆ ವಿಶ್ಲೇಷಿಸುವುದು.

(2) ನೆರೆಯೊರೆಯ ರಾಜ್ಯಗಳಲ್ಲಿನ ಸಾರ್ವಜನಿಕ ಸಂಗ್ರಹಣಾ ನಿಯಮಾವಳಿಗಳ ಅನುಪಾಲನೆ ಬಗ್ಗೆ ಅಧ್ಯಯಿಸುವುದು.

(3) ಸಾರ್ವಜನಿಕ ಸಂಗ್ರಹಣಾ ವಿಧಿ ವಿಧಾನವನ್ನು ಅನುಸರಿಸುವಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಅನುಷ್ಠಾನಾಧಿಕಾರಿಗಳು ವಿಫಲಗೊಳ್ಳಲು ಕಾರಣವಾಗುತ್ತಿರುವ ಅಂಶಗಳ ವಿಶ್ಲೇಷಣೆ.

(4) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ವಿವಿಧ ಕೇಂದ್ರ/ರಾಜ್ಯ ಪ್ರಾಯೋಜಿತ ಕಾರ್ಯಕ್ರಮಗಳಲ್ಲಿ ಸಂಗ್ರಹಣೆಗಳ ಕುರಿತಂತೆ ಇರುವ ನಿಯಮಗಳನ್ನು ಅಧ್ಯಯಿಸುವುದು.

ಮೇಲೆ ತಿಳಿಸಿದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಪಂಚಾಯತ್ ರಾಜ್ ಸಂಸ್ಥೆಗಳಲ್ಲಿನ ಸೇವೆಗಳು, ನಿರ್ಮಾಣ ಕಾಮಗಾರಿಗಳು, ಸರಕು ಸಾಮಗ್ರಿಗಳ ಸರಬರಾಜು ಇತ್ಯಾದಿ ಸಂಗ್ರಹಣೆಯಲ್ಲಿ ಅನುಸರಿಸಬೇಕಾದ ವಿಧಾನಗಳನ್ನು ಸುಲಭಸಾಧ್ಯವಾಗುವ ರೀತಿಯಲ್ಲಿ ಮಾರ್ಗಸೂಚಿಯನ್ನು ತಯಾರಿಸುವುದು.

ಈ ಮಾರ್ಗಸೂಚಿಯ ಕರಡನ್ನು 3 ತಿಂಗಳೊಳಗೆ ಸಿದ್ಧಪಡಿಸಿ ಪರಿಶೀಲನೆಗಾಗಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಬಿ. ರಘುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾ.ಅ. & ಪಂ.ರಾಜ್ ಇಲಾಖೆ

ಪಿ.ಆರ್. 113

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸು ಸುಧಾರಣೆಗಳು– 'ಪೊಲೀಸ್ ದೂರುಗಳ ಪ್ರಾಧಿಕಾರ'ದ ರಚನೆ – ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 59 ಪೊಸಇ 2009 ದಿನಾಂಕ: 03–12–2010.

2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ಆರ್‌ಎಲ್‌ಎನ್ (1) 7/2011–12 ದಿನಾಂಕ: 04–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ ಹಾಗೂ ಜಿಲ್ಲಾ ಮಟ್ಟದ ಪೊಲೀಸ್ ದೂರುಗಳ ಪ್ರಾಧಿಕಾರಗಳನ್ನು ರಚಿಸಿದೆ. ಸದರಿ ದೂರು ಪ್ರಾಧಿಕಾರಗಳಿಗೆ ಸಹಾಯಕವಾಗಿ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರಕ್ಕೆ ವಿವಿಧ ದರ್ಜೆಯ 12 ಹುದ್ದೆಗಳು ಹಾಗೂ ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರಕ್ಕೆ ವಿವಿಧ ದರ್ಜೆಯ 06 ಹುದ್ದೆಗಳನ್ನು ಸೃಜಿಸಿದೆ.

ಮೇಲೆ ಓದಲಾದ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರದಲ್ಲಿ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ, ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರಗಳಲ್ಲಿ ಸಹಾಯಕರಾಗಿ ಸೃಜಿಸಿರುವ ಒಟ್ಟು 222 ಹುದ್ದೆಗಳಿಗೆ ತಗಲುವ ಆವರ್ತಕ ವೆಚ್ಚ ರೂ. 4,25,60,364/– ಹಾಗೂ ಅನಾವರ್ತಕ ವೆಚ್ಚ ರೂ. 70,78,000/– ಗಳಿಗೆ ಹೆಚ್ಚುವರಿ ಅನುದಾನ ಕೋರಿದ್ದಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 90 ಇಎಫ್‌ಎಸ್ 2011, ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 59 ಪೊಸಇ 2009 ದಿನಾಂಕ: 03–12–2010ನ್ನು ಹುದ್ದೆಗಳ ಮಂಜೂರಾತಿಗೆ ಸಂಬಂಧಿಸಿದಂತೆ ಭಾಗಶಃ ಮಾರ್ಪಡಿಸಿ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರಗಳಿಗೆ ಸಹಾಯಕವಾಗಿ ಸೃಜಿಸಿರುವ ಹುದ್ದೆಗಳನ್ನು ಕೆಳಕಂಡಂತೆ ಮಾರ್ಪಾಟು ಮಾಡಿ ಒಟ್ಟು 109 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ | ಹುದ್ದೆಗಳು |
|---|---|
| 1) ಪ್ರಥಮ ದರ್ಜೆ ಸಹಾಯಕ | 01 |
| 2) ಡ್ರೈವರ್ | 01 |
| **ಒಟ್ಟು** | **02** |

ಡ್ರೈವರ್ ಹುದ್ದೆಯನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡತಕ್ಕದ್ದು.

| ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರ | ಹುದ್ದೆಗಳು |
|---|---|
| 1) ಪ್ರಥಮ ದರ್ಜೆ ಸಹಾಯಕ (1 X 35) | 35 |
| **ಒಟ್ಟು** | **35** |

ಮೇಲ್ಕಂಡ ಎರಡೂ ಪ್ರಾಧಿಕಾರಗಳಿಗೆ ಅಗತ್ಯವಿರುವ ಶೀಘ್ರಲಿಪಿಗಾರ್ತಿ/ಬೆರಳಚ್ಚುಗಾರರ ಹಾಗೂ ಗ್ರೂಪ್–ಡಿ ದರ್ಜೆಯ 2 X 36=72 ಹುದ್ದೆಗಳನ್ನು ಖಾಯಂ ಹುದ್ದೆಗಳನ್ನಾಗಿ ಸೃಜಿಸದೆ ಅವುಗಳನ್ನು ತಾತ್ಕಾಲಿಕ ಹುದ್ದೆಗಳಾಗಿ ಸೃಜಿಸಿದೆ. ಸದರಿ ಹುದ್ದೆಗಳ ಸೇವೆಯನ್ನು ಬಾಹ್ಯ ಮೂಲದಿಂದ (Service Outsourcing) ಕೆ.ಟಿ.ಪಿ.ಪಿ. ಕಾಯ್ದೆ ಹಾಗೂ ನಿಯಮಗಳನ್ವಯ ಪಡೆಯತಕ್ಕದ್ದು.

ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರವಾಗಿ ಸಂಬಂಧಪಟ್ಟ ಜಿಲ್ಲೆಗಳ ಪ್ರಾದೇಶಿಕ ಆಯುಕ್ತರನ್ನು ನೇಮಕ ಮಾಡಿರುವುದರಿಂದ ಜಿಲ್ಲಾ ದೂರು ಪ್ರಾಧಿಕಾರಕ್ಕೆ ಡ್ರೈವರ್ ಹುದ್ದೆಯ ಅಗತ್ಯವಿರುವುದಿಲ್ಲ.

ಸದರಿ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2055–00–001–0–01–002–003 ವೇತನಗಳು ಇದರಡಿಯಲ್ಲಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 319 ವೆಚ್ಚ 11/2011 ದಿನಾಂಕ: 23–11–2011ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 114 ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ 2008–09ನೇ ಸಾಲಿನ ಕಾರ್ಯ ನಿರ್ವಹಣಾ ವರದಿಯಲ್ಲಿ ಇರುವ ಪ್ರತಿಕೂಲ ಷರಾವನ್ನು ಸ್ಥಿರೀಕರಿಸುವ ಬಗ್ಗೆ–ಆದೇಶ.

**ಓದಲಾಗಿದೆ :** 1. ದಿನಾಂಕ: 20–05–2010, 7/13–07–2010 ಮತ್ತು 30–07–2010ರ ಡಿವೈಎಸ್‌ಎಸ್/ಪಿಎಸ್/2010–11ನೇ ಸಂಖ್ಯೆಯ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರ ಪತ್ರಗಳು.

2. ದಿನಾಂಕ: 20–09–2010ರ ಐಜಿಪಿ/ಹೆಚ್‌ಆರ್‌ಸಿ/37/2010 ನೇ ಸಂಖ್ಯೆಯ ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗದ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಇವರ ಪತ್ರ.

**ಪ್ರಸ್ತಾವನೆ :**

ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಭಾಗ–3ರ ವರದಿ ಮಾಡುವ ಪ್ರಾಧಿಕಾರದ ಕಾಲಂನಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಅಂದಿನ

ಆಯುಕ್ತರಾಗಿದ್ದ ಶ್ರೀ ಎನ್.ಎಸ್. ಮೇಘರಿಖ್ ರವರು ಪ್ರತಿಕೂಲ ಷರಾವನ್ನು ನಮೂದಿಸಿರುತ್ತಾರೆ. ಈ ಪ್ರತಿಕೂಲ ಷರಾವನ್ನು ಅಂಗೀಕಾರ ಪ್ರಾಧಿಕಾರವಾಗಿ ಯುವಜನ ಸೇವಾ ಇಲಾಖೆಯ ಅಂದಿನ ಸರ್ಕಾರದ ಕಾರ್ಯದರ್ಶಿರವರು ಅಂಗೀಕರಿಸಿರುತ್ತಾರೆ. ಈ ಪ್ರತಿಕೂಲ ಷರಾದ ಬಗ್ಗೆ ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಸಲ್ಲಿಸಿರುವ ವಿವರಣೆಯನ್ನು ಸರ್ಕಾರಕ್ಕೆ ಕಳುಹಿಸುತ್ತಾ, ಸದರಿಯವರ ವಿವರಣೆಯನ್ನು ಒಪ್ಪುವ ಬಗ್ಗೆ ಅಂದಿನ ಆಯುಕ್ತರಿಂದ ಸ್ಪಷ್ಟ ಅಭಿಪ್ರಾಯವನ್ನು ಪಡೆಯುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 20–05–2010ರ ಪತ್ರದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು ಕೋರಿದ್ದರು.

ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಸುಮಾರು ವರ್ಷಗಳಿಂದ ಕುಡಿಯುವ ಅಭ್ಯಾಸವನ್ನಿಟ್ಟುಕೊಂಡಿರುತ್ತಾರೆ; ಕಚೇರಿಗೆ ಪಾನಮತ್ತರಾಗಿ ಬರುತ್ತಿದ್ದುದು ಸರ್ವಸಾಮಾನ್ಯವಿದ್ದು, ಎಲ್ಲಾ ಅಧಿಕಾರಿ ಮತ್ತು ಸಿಬ್ಬಂಧಿ ವರ್ಗದವರಿಗೆ ಗೊತ್ತಿರುವ ವಿಷಯವಾಗಿದ್ದು, ಪಾನಮತ್ತರಾಗಿ ಬಂದ ಹಲವು ಸಂದರ್ಭಗಳನ್ನು ಉಲ್ಲೇಖಿಸುತ್ತಾ, ಸದರಿ ಅಧಿಕಾರಿರವರ 2008–09ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ತಾವು ಬರೆದಿರುವ ಪ್ರತಿಕೂಲ ಷರಾವನ್ನು ತೆಗೆದುಹಾಕುವುದು ಸೂಕ್ತವಲ್ಲವೆಂದು ಪರಿಗಣಿಸುವಂತೆ ಶ್ರೀ ಎನ್.ಎಸ್. ಮೇಘರಿಖ್, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಅಂದಿನ ಆಯುಕ್ತರು ಹಾಗೂ ಹಾಲಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗದ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿ, ಇದರಲ್ಲಿನ ಪ್ರತಿಕೂಲ ಷರಾದ ಸಂಬಂಧ ಸದರಿ ಅಧಿಕಾರಿರವರು ಸಲ್ಲಿಸಿರುವ ದಿನಾಂಕ 26–01–2010 ರ ಮನವಿಯಲ್ಲಿನ ಅಂಶಗಳು ಹಾಗೂ ಅಂದಿನ ಆಯುಕ್ತರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಮತ್ತು ವಾರ್ಷಿಕ ಕಾರ್ಯನಿರ್ವಹಣಾ ವರದಿಯ ವರದಿ ಮಾಡುವ ಪ್ರಾಧಿಕಾರ ಇವರ ವರದಿಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಯುಸೇಇ 76 ಯುಇಸೇ 2010 ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿನ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಎ.ಎಂ. ಮಹಾದೇವಪ್ಪ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಇವರ 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿನ ವರದಿ ಪ್ರಾಧಿಕಾರ/ಪುನರಾವಲೋಕನ ಪ್ರಾಧಿಕಾರ ಹಾಗೂ ಅಂಗೀಕಾರ ಪ್ರಾಧಿಕಾರಗಳು ದಾಖಲಿಸಿರುವ ಪ್ರತಿಕೂಲ ಷರಾವನ್ನು ಸಲಹಾತ್ಮಕ ಷರಾ ಎಂದು ಪರಿಗಣಿಸದೆ, "ಪ್ರತಿಕೂಲ ಷರಾ" ಎಂದೇ ಪರಿಗಣಿಸಿ, ಈ ಮೂಲಕ ಸ್ಥಿರೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನ ಸೇವಾ ಇಲಾಖೆ.

ಪಿ.ಆರ್. 115

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಬೇಲಿಕೇರಿ ಮತ್ತು ಕಾರವಾರ ಬಂದರುಗಳಲ್ಲಿ ಅನಧಿಕೃತವಾಗಿ ಸಾಗಿಸಿ ದಾಸ್ತಾನಿರಿಸಿದ್ದ ಕಬ್ಬಿಣದ ಅದಿರನ್ನು ವಶಪಡಿಸಿಕೊಂಡು ಹೂಡಿರುವ ಅರಣ್ಯ ಮೊಕದ್ದಮೆಗಳ ಸಂಪೂರ್ಣ ತನಿಖೆಯನ್ನು ಸಿಐಡಿಗೆ ವಹಿಸಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಒಇ 91 ಸಿಐಡಿ 2011, ಬೆಂಗಳೂರು, ದಿನಾಂಕ: 28–09–2011.
2. Deputy Inspector General of Police, CID, ಬೆಂಗಳೂರು ರವರ ಪತ್ರ ಸಂಖ್ಯೆ: 1/ಸಿಸಿಆರ್/ಸಿಐಡಿ/2011–12, ದಿನಾಂಕ 12–10–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಒಳಾಡಳಿತ ಇಲಾಖೆಯು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕೋರಿಕೆಯ ಮೇರೆಗೆ ಬೇಲಿಕೇರಿ ಮತ್ತು ಕಾರವಾರ ಬಂದರುಗಳಲ್ಲಿ ಅನಧಿಕೃತವಾಗಿ ಸಾಗಿಸಿ ದಾಸ್ತಾನಿರಿಸಿದ್ದ ಕಬ್ಬಿಣದ ಅದಿರನ್ನು ವಶಪಡಿಸಿಕೊಂಡು ಹೂಡಿರುವ ಅರಣ್ಯ ಮೊಕದ್ದಮೆಗಳ ಸಂಪೂರ್ಣ ತನಿಖೆಯನ್ನು ಸಿಐಡಿಗೆ ವಹಿಸಿ ಆದೇಶ ಮಾಡಿರುತ್ತದೆ.

ಮೇಲೆ ಓದಲಾಗಿರುವ (2)ರ ಪತ್ರದಲ್ಲಿ Deputy Inspector General of Police, CID, Bangalore ಇವರು ಓದಲಾಗಿರುವ ಸರ್ಕಾರದ (1) ರ ಆದೇಶದಲ್ಲಿ ಬೇಲಿಕೇರಿ ಮತ್ತು ಕಾರವಾರ ಬಂದರುಗಳಲ್ಲಿ ಅನಧಿಕೃತವಾಗಿ ಸಾಗಿಸಿ ದಾಸ್ತಾನಿರಿಸಿದ್ದ ಕಬ್ಬಿಣದ ಅದಿರನ್ನು ವಶಪಡಿಸಿಕೊಂಡು ಹೂಡಿರುವ ಅರಣ್ಯ ಮೊಕದ್ದಮೆಗಳ ಸಂಪೂರ್ಣ ತನಿಖೆಯನ್ನು ಸಿಐಡಿಗೆ ವಹಿಸಿರುವುದರಿಂದ, ತನಿಖಾ ಕಾರ್ಯವನ್ನು ಸುಗಮವಾಗಿ ಮಾಡಲು ಅರಣ್ಯ ಇಲಾಖೆಯಿಂದ ವಿಷಯವನ್ನು ಚೆನ್ನಾಗಿ ಬಲ್ಲ ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರುಗಳನ್ನು ಕ್ರಮವಾಗಿ ನೋಡಲ್ ಮತ್ತು ಸಹಾಯಕ ನೋಡಲ್ ಅಧಿಕಾರಿಗಳನ್ನಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರನ್ನು ನೋಡಲ್ ಅಧಿಕಾರಿಯನ್ನಾಗಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅಂಕೋಲ ಉಪ ವಿಭಾಗ, ಅಂಕೋಲ ರವರನ್ನು ಸಹಾಯಕ ನೋಡಲ್ ಅಧಿಕಾರಿಯನ್ನಾಗಿ ನೇಮಕ ಮಾಡಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 112 ಎಫ್‌ಎಫ್‌ಎಂ 2010 (ಭಾಗ–3), ಬೆಂಗಳೂರು, ದಿನಾಂಕ : 27ನೇ ಡಿಸೆಂಬರ್ 2011**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು, ಬೇಲಿಕೇರಿ ಮತ್ತು ಕಾರವಾರ ಬಂದರುಗಳಲ್ಲಿ ಅನಧಿಕೃತವಾಗಿ ಸಾಗಿಸಿ ದಾಸ್ತಾನಿರಿಸಿದ್ದ ಕಬ್ಬಿಣದ ಅದಿರನ್ನು ವಶಪಡಿಸಿಕೊಂಡು ಹೂಡಿರುವ ಅರಣ್ಯ ಮೊಕದ್ದಮೆಗಳ ಸಂಪೂರ್ಣ ತನಿಖೆಯನ್ನು ಸಿಐಡಿಗೆ ವಹಿಸಿದ್ದು, ತನಿಖೆಗೆ ಸಹಾಯ ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರನ್ನು ನೋಡಲ್ ಅಧಿಕಾರಿಯನ್ನಾಗಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅಂಕೋಲ ಉಪ ವಿಭಾಗ, ಅಂಕೋಲ ಇವರನ್ನು ಸಹಾಯಕ ನೋಡಲ್ ಅಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 116

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 107 ಮುಸರ 2008 (ಭಾ), ದಿನಾಂಕ: 25–02–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ನೆಲಮಂಗಲ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ನೆಲಮಂಗಲ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 32 ಮುಸರ 2011 ಬೆಂಗಳೂರು, ದಿನಾಂಕ : 23ನೇ ಡಿಸೆಂಬರ್ 2011**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧೀಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ವಾಸುದೇವಮೂರ್ತಿ ಬಿನ್ ಎಸ್.ಸಂಪಂಗಿ ರಾಮಶೆಟ್ಟಿ, ತ್ಯಾಮಗೊಂಡ್ಲು, ತ್ಯಾಮಗೊಂಡ್ಲು ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಾಮಾನ್ಯ |
| 2 | ಶ್ರೀಮತಿ ಸವಿತ ಬಿನ್ ಲೇಟ್, ತಲಕಾಡು ಸುಬ್ಬರಾಯರ ಬೀದಿ, ನೆಲಮಂಗಲ ಟೌನ್, ನೆಲಮಂಗಲ | ಮಹಿಳೆ |
| 3 | ಶ್ರೀ ಮುನಿರಾಜು ಬಿನ್ ಗಂಗಹನುಮಯ್ಯ, ಆಂಜನೇಯ ದೇವಸ್ಥಾನದ ರಸ್ತೆ, ಕೆಂಪಲಿಂಗನಹಳ್ಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಪರಿಶಿಷ್ಟ ಜಾತಿ |
| 4 | ಶ್ರೀ ಜಯರಾಜು ಬಿನ್ ಸಿದ್ದರಂಗಯ್ಯ, ಹೆಗ್ಗುಂದ, ನರಸೀಪುರ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 117